ಕರ್ನಾಟಕ ಸರಕಾರ



ಕಾವ್ಯ

# ಆಯ್ದ ಕವನಗಳು



ಗೋಪಾಲ ಕೃಷ್ಣ ಅಡಿಗ



ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ 4



ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ವೇ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.
ತಾ. 20-1-1988 ನೇ ಬುಧವಾರ

# ಆಯ್ದ ಕವನಗಳು

( ೧೯೩೭--೧೯೮೦ )

**ಗೋಪಾಲಕೃಷ್ಣ ಅಡಿಗ**



**ವಿಶ್ವ ಕನ್ನಡ ಸಮ್ಮೇಳನ**

**೧೪/೩ ಎ, ನೃಪತುಂಗ ರಸ್ತೆ, ಬೆಂಗಳೂರು - ೫೬೦ ೦೦೨**

ADIGARA AAYDA KAVANAGALU — Poems by Gopalakrishna Adiga. Published by K. Jayacharya K.A.S., Additional Director of Kannada and Culture (Viswa Kannada Sammelana) 14/3, Nrupathunga Road Bangalore-560 002
Pages 212+viii 1983, 5000 Copies.





2nd Edition



ಬೆಲೆ: 2-50

ಮುದ್ರಕರು: ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ (ಪ್ರೈ.) ಲಿ.,
ಬೆಂಗಳೂರು-೫೬೦ ೦೦೪

ಆರ್. ಗುಂಡೂರಾವ್
ಮುಖ್ಯ ಮಂತ್ರಿಗಳು




ವಿಧಾನ ಸೌಧ
ಬೆಂಗಳೂರು
ದಿನಾಂಕ ೧೮-೯-೧೯೮೨

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆ ಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿಸಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಳೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ, ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು.

ಇದರಂತೆ ಒಂದು ನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲೂ ಕನ್ನಡ ಸಾಹಿತ್ಯದ ಸತ್ವ ವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯಿ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖ ಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆ ಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ಸಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನ ವನ್ನು ಹರಸಿ, ಮಂಗಳವುಂಟು ಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯ ಮಂತ್ರಿಗಳು

# ಅನುಕ್ರಮಣಿಕೆ

# ಎರಡು ಮಾತು

'ಆಯ್ದ ಕವನಗಳು' ಎಂಬ ನನ್ನ ಈ ಕಾವ್ಯ ಸಂಕಲನ ೧೯೬೮ರಲ್ಲಿ ಸಾಗರದ ಅಕ್ಷರ ಪ್ರಕಾಶನದವರಿಂದ ಪ್ರಕಟವಾಯಿತು. ಆ ಮುದ್ರಣದ ಪ್ರತಿಗಳೆಲ್ಲ ಮುಗಿದು ಹೋಗಿ ಅನೇಕ ವರ್ಷಗಳಾದ ಮೇಲೆ ಈಗ ಈ ಮುದ್ರಣ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಕರ್ನಾಟಕ ಸರಕಾರದ ಸಹಾಯದಿಂದ ತೀರ ಅಗ್ಗದ ಬೆಲೆಯಲ್ಲಿ ಪ್ರಕಟವಾಗುತ್ತಿದೆ. ಹೀಗೆ ಈ ಕವನಗಳು ಬಹು ಜನರ ಕೈಗೆ ಸಿಲುಕುವಂತೆ ಮಾಡಿರುವುದಕ್ಕೆ ನಾನು ಕೃತಜ್ಞ.

ಈ ಗ್ರಂಥದ ಮೊದಲ ಮುದ್ರಣಕ್ಕಾಗಿ ಕವನಗಳನ್ನು ಆಯ್ಕೆ ಮಾಡಿ ನೆರವಾಗಿದ್ದ ಶ್ರೀ ರಾಮದಾಸ ಮತ್ತು ಶ್ರೀ ಬಿ. ದಾಮೋದರರಾಯರ ಸಹಕಾರವನ್ನು ಇಲ್ಲಿ ಕೃತಜ್ಞತೆಯಿಂದ ನೆನೆಯುತ್ತೇನೆ. ಅನಂತರ ಪ್ರಕಟವಾಗಿದ್ದ ಕವನಗಳಲ್ಲಿ ಕೆಲವನ್ನು ಆಯ್ದು ಕೊಟ್ಟು ಉಪಕರಿಸಿರುವ ಶ್ರೀ ಸುಮತೀಂದ್ರ ನಾಡಿಗರನ್ನು ಇಲ್ಲಿ ಸ್ಮರಿಸುತ್ತೇನೆ. ಅಲ್ಲಲ್ಲಿ ಉಳಿದು ಹೋಗಿರುವ ತಪ್ಪುಗಳ ತಿದ್ದುಪಡಿ ಪಟ್ಟಿಯನ್ನು ಗಮನಿಸಿ ತಿದ್ದಿಕೊಂಡು ಓದಬೇಕಾಗಿ ವಾಚಕರಲ್ಲಿ ವಿನಂತಿ. ಆದಷ್ಟು ಹೆಚ್ಚು ಮಂದಿ ಓದಿ ಆ ಮೂಲಕ ನನ್ನ ಕೆಲಸ ಸಾರ್ಥಕವಾದರೆ ನಾನು ಕೃತಾರ್ಥ.

ಬೆಂಗಳೂರು-೮೨
೭-೨-೧೯೮೫ **ಗೋಪಾಲಕೃಷ್ಣ ಅಡಿಗ**

# ನನ್ನ ನುಡಿ

ಹಲವು ಹೂಗಳ ಸುಗಂಧವ ತರುವ ಹರಿಕಾರ,
ಎಲೆಲೆ ಮಂದಾನಿಲನೆ ! ನಿನಗೆ ಸೌರಭಸಾರ
ದೊರೆಕೊಳ್ಳಲಿಲ್ಲ ; ಹಲವಾರು ನಕ್ಷತ್ರಗಳ
ಸೆರೆಹಿಡಿದು ತಂದು ಕೊಡುವ ದೀಪ್ತಕಾಸಾರ !
ನಿನಗಿಲ್ಲ, ನಿನಗಿಲ್ಲ ; ಬಾಳ ಬೆಳಗುವ ದೀಪ ;
ಹಲವು ಬಣ್ಣವ ತಳೆದು ಮೆರೆವ ಸಂಧ್ಯಾಮೇಘ !
ನಿನಗಿಲ್ಲ, ನಿನಗಿಲ್ಲವಣ್ಣ, ಮಾಸಲುಬಣ್ಣ !
ಚಂದ್ರಸೂರ್ಯರ ನೆರವಿನಿಂದೆ ಬೆಳಗುವಳೀ ವ-
ಸುಂಧರೆಗದೆಂದು ಬಹುದೋ ಸ್ವಯಂದೀಪಕತೆ !
ಅವರಿರವರ ನುಡಿಗಳನು ಕದ್ದು ಮರುನುಡಿಗೊಡುವ
ದೆಸೆಗಳೇ, ನಿಮಗೆಂದು ಬಹುದು, ಮಾಸಲು ನಿನದ ?

ಅನ್ಯರೊರೆದುದನೆ, ಬರೆದುದನೆ ನಾ ಬರೆಬರೆದು
ಬಿನ್ನಗಾಗಿದೆ ಮನವು ; ಬಗೆಯೊಳಗನೇ ತೆರೆದು
ನನ್ನ ನುಡಿಯೊಳೆ ಬಣ್ಣ ಬಣ್ಣದಲಿ ಬಣ್ಣಿಸುವ
ಪನ್ನತಿಕೆ ಬರುವನಕ ನನ್ನ ಬಾಳಿದು ನರಕ !

## ಬಯಕೆ

ಅಂದು ರಸಋಷಿಗಳೆನಿಬರೊ ಬರೆದ ಕಾವ್ಯರಸ
ಸಿಂಧುವಿನೊಳಿದೆ ಮಿಂದು ಮಿರುಗುಗೊಳಲಿ ;
ಅಂದಿನವರಾಂತರ್ಯದೊಂದು ಶಾಂತಿಯ ಕಾಂತಿ
ಇಂದೆಮ್ಮ ಕೃತಿಗಳಲಿ ಮಾರ್ಪೊಳೆಯಲಿ !

ಹಳೆತನದ ಪೊರೆಯೊಳಿದೆದುಂಬಿ ತಪಮಿರ್ದು ಸೂ
ಜ್ವಳವಾಗಿ ಹೊರಬಂದು ಗರಿಹೊಡೆಯಲಿ ;
ಬಳಿಕ ಹೊಸತನದ ಮೃದುಗಂಭೀರ ಝಂಕಾರ
ಇಳೆಯಗಲವನು ಮಿಡಿದು ಮೊಳಗುತಿರಲಿ !

ಚಿರಯುವತಿ ಪ್ರಕೃತಿ ; ಅವಳಮರಸೌಂದರ್ಯರಸ
ದೊರತೆಯನು ಕುಡಿದು ಬಗೆ ತುಂಬುತಿರಲಿ ;
ಸರಸಕವಿತೆಯ ಬಿಂದುಬಿಂದುಗಳ ಹೊರಗೆಡಹಿ
ತಿರೆಗೆ ಸಂತಸದೊಸಗೆಯನು ಸಾರಲಿ !

ಮನುಜನೆದೆಯೊಳು ಮಲೆತು ಮೊರೆದೆಸೆವ ಪಶುವ ಗ-
ರ್ಜನೆ ನನ್ನ ಕೃತಿಗಳಲಿ ಮಸಗದಿರಲಿ ;
ಮನುಜನೊಳಗಿನ ದೈವಿಕತೆಯ ಕಿಡಿಯಂ ಸ್ಫುರಿಸ
ಲನುವಾಗಿ ಬಾಳ್ವಿಯಿದು ಸವೆಯುತಿರಲಿ !

ಶರನಿಧಿಯ ಗುಣ್ಪು ಬಾಂದಳದ ಪೆಂಪರಲುಗಳ
ನರುಗಂಪು ತಣ್ಣೆಲರ ತಂಪು ಕೂಡಿ
ಚಿರವಾಗಿ ಬಗೆಯರಸನುಸಿರ ಸೋಂಕಿಗೆ ಬೀಗಿ
ಮರೆಯಲೆದೆ ಮೈಮರೆದು ಹಾಡಿ ಹಾಡಿ ;

# ಅಳಿಯಲಾರದ ನೆನಹು

ಅಳಿಯಲಾರದ ನೆನಹು ಜೀವಜೀವಾಳದಲಿ
ಬಲವಾಗಿ ಬೇರೂರಿ ನಿಂದು
ಗಳಿಗೆಗಳಿಗೆಗೆ ಬಾಳುವೆಯ ದಾರಿಯನು ತಡೆದು
ಸೆಳೆದಪುದು ಭೂತದೆಡೆಗಿಂದು.

ಕಳೆದ ಬಾಳುವೆಯೆ ನಲ್ಗನಸಿದೋ ಜೀವನದ
ಹೊಳೆಯು ಮೊದಲಿಂ ತುದಿಯವರೆಗೂ
ಅಲೆಯಾಗಿ, ಸುಳಿಯಾಗಿ, ಸುಳಿವ ಮೆಲ್ಲೆಲರಾಗಿ
ಬಳಸಿಹುದು ಬಹುರೂಹುವಡೆದು !

ಭಾವವೀಣೆಯ ತಂತಿಯನು ಮಿಾಂಟಿದೊಡೆ ಕಳೆದ
ಜೀವನವೆ ಬಹುರಾಗಗೊಂಡು
ತೀವಿ ಹರವುದು, ಮನವನಳಲಿಪುದು, ನಲಿಯಿಪುದು,
ಆವುದೋ ನವರಸದಿ ನಾಂದು.

ಸುಖದುಃಖಗಳ ರಾಗಭೋಗಗಳ ನೇಹಗಳ
ಸಕಲಾನುಭಾವಗಳು ಕರಗಿ,
ಕರಗಿ ಸಮರಸವಾಗಿ ಒಂದೆದೆಯು ಕಂದರದಿ
ಮೊರೆಯುತಿಹುದೊಂದೆ ತಾನದಲಿ !

ಎನಿತೆನಿತೊ ಹಗಲಿರುಳು ಸಮೆದ ಕಿರುದಾರಿಯಲಿ
ನೆನೆಹೆಂಬ ಕಿರುಸೊಡರ ಹಿಡಿದು
ಮನದ ಮಂದಿರಕಳಿದ ಬಾಳುವೆಯ ಚಿರವಿನೂ-
ತನ ಚಿತ್ರಗಳು ಧೀಂಕಿಡುವುವು !

ಸಂಜೆಯೂಗಸದ ನವರಾಗರಂಜಿತಮೇಘ
ಪುಂಜದಂತಿವು ಚಣಕೆ ಚಣಕೆ
ಒಂದೊಂದು ರೂಪದಲಿ, ಒಂದೊಂದು ರಾಗದಲಿ
ಬಂದು ಸೋಂಕುವುವೆದೆಯ ತಳಕೆ !

ಮುಂದುಮುಂದಕೆ ಹಾರಲಾರದೆನ್ನೆದೆದುಂಬಿ
ಹಿಂದುಹಿಂದಕೆ ಹಾರುತಿಹುದು ;
ಹಿಂದಿನಿರವಿನ ಬಾಡಿಬಿದ್ದ ಹೂವಿನ ಕೆಲದಿ
ನಿಂದು ನಿರುಕಿಸಿ ಚೀರುತಿಹುದು !

ಎಳಹರೆಯವೆಂಬ ಸಂತಸದ ಹೊನಲಡಗುತಿರೆ
ಅಳಿಜವ್ವನದ ಮರುವಿನೊಳಗೆ,
ಕಳೆಯುಡುಗಿ ಹಡಿಲಾಗಿ ಬಗೆ ಅಳಲ ಮಡಿಲಾಗಿ
ತಳರುತಿದೆ ಮೃತ್ಯುವಿನ ತಡಿಗೆ.

# ವಿಧಿಗೆ

ವಿಧಿಯೆ ! ನಿನ್ನಿದಿರು ಮಾರಾಂತು ಹೋರಾಡಿ ಕೆ–
ಚ್ಚೆದೆತನದ ಬಲ್ಮೆಯನು ಬಿತ್ತರಿಪೆನು ;
ಪದವನಿಡುತೆನ್ನೆದೆಯ ಮೇಲೆ ತಾಂಡವವೆಸಗು !
ಬೆದರುವೆನೆ ? ಬೆಚ್ಚುವೆನೆ ? ನಿನಗೆ ;–ನಾನು ?

ಬಾಳುವೆಯ ಹಂದರಲಿ ಹೊಂಗನಸುಗಳ ಹೆಣೆದು
ತೇಲಾಡುತಿರೆ ಗಾಳಿಯಂತೆ ಮನವು,
ದಾಳಿಯಿಟ್ಟೆಲ್ಲವನು ಹಾಳುಮಾಡಿದೆ. ನಿನ್ನ
ಮೇಲೆ ಕೆರಳದೆ ನನ್ನ ಗಂಡುತನವು ?

ಬಿರುಗಾಳಿಯಂತೆನ್ನ ಬಾಳ್ವೆದೋಣಿಯನು ಗಿರ
ಗಿರನೆ ತಿರುಗಿಸು ಭವಾಂಬುಧಿಮಧ್ಯದಿ !
ಉರಿವುರಿವ ದಾವಾಗ್ನಿಯಂತೆನ್ನ ಹಿರಿಯಾಸೆ
ತಳಗೆಲೆಗಳಂ ಸುಟ್ಟು ಬೂದಿಗೊಳಿಸು !

ಸೋಲುಗಳ ಕೋಲುಗಳನೆಸೆದೆನ್ನ ಬಾಳುವೆಯ
ಸೀಳು ; ಹೋಳೆನ್ನೊಡಲ ಹಲವು ಬಾರಿ !
ದಾಳಿಡುವ ನಿನಗೆ ಶರಣೆನದೆ ಬೀಳ್ಗಳೆದು ಮೇ
ಲ್ಬೀಳುವೆನು, ವೀರನಿಗದೊಂದೆ ದಾರಿ !

ಹುಟ್ಟುಸಾವಿನ ಸೋಲುಗೆಲುವಿನೊಡೆತನ ನಿನ್ನ
ಕಟ್ಟಿಗೊಳಗಾದೊಡೇನಯ್ಯ ? ಹೇಳು !
ಹುಟ್ಟುಸಾವುಗಳ ಸೀಮೆಯ ಮೀರಿ ನಿಂತ ಜಗ
ಜಟ್ಟಿಯೈ, ಆತ್ಮಸ್ವರೂಪಿ ನಾನು !

ಉಸಿರಿರುವ ವರೆಗೆ ನಿನ್ನೊಡನೆ ಕಾದಾಡುವೆನು ;
ಬಸವಳಿದೊಡೆದ್ದು ಮಸಗುವೆನು ತಿರುಗಿ !
ಉಸಿರಿಡುವ ಹೆಣವಾಗಿ ಬಾಳುವೆನೆ ? ಚಲದ ಮೈ
ಮುಸಕವಂ ಮೆರೆಯದೆಯೆ ಹಿಂದೆ ಜರುಗಿ !

ತಿರುತಿರುಗಿ ಹುಟ್ಟು ಸಾವುಗಳಿಂಗೆ ಜಿಗಿದು ಬಾಂ
ಬರಮಳುರಿ ಬಂದಿನನನಿಕ್ಕಿ ತಿರೆಗೆ
ಉರುಳುವಂಬುದಂತೆ ಸೋಲಿನಿಂದೆದೆಗೆಡದೆ
ತಿರುತಿರುಗಿ ಬಂದು ನಿಂದಪೆನು ಧುರಕೆ !

ಕೊಲುವೆಯಾದೊಡೆ ಕೊಲಿಸಿಕೊಳುವೆ ; ಯಾತನೆಗೊಳಿಸಿ
ನಲಿವ಼ಾದೊಡೆ ನಗಿಸಿಕೊಂಬೆನೆಂಬ ೩೦
ಬಲುಹೆಸ್ಮೊಳಿರಲು ತಲೆವಾಗುವೆನೆ ನಿನಗೆ ? ನಿ
ಶ್ಚಲನಿಶ್ಚಯವೆ ತಾನೆ ಸಿರಿ ಬೀರದ !

ಎಲೆಲೆ ವಿಧಿ ! ನೋಡಿಲ್ಲಿ ನಿಂತಿರುವೆನೆದೆಸೆಟೆದು ;
ನಿನಗೆ ಧುರವೀಳ್ಯವಂ ಕೊಡುವೆನಿದೆಕೋ !
ಸೆಣಸು, ಹೋರಾಡೆನ್ನ ಕುನಿಸು ; ತೊತ್ತಳದುಳಿದು
ಕೊನೆಗಲ್ಪತನುವಿದಂ ನೀಂ ಕಳಚಿಕೋ ! ೩೬

# ಹೊಸಹಾದಿ

ಹೊಸಹಾದಿಯನು ಹಿಡಿದು ನಡೆಯಣ್ಣ, ಮುಂದೆ !
ಹೊಸಜೀವ, ಹೊಸಭಾವ, ಹೊಸವೇಗದಿಂದೆ.

ಜಗಕೊಂದು ಯುಗಕೊಂದು ಹೊಸ ಹೆಸರು ಬೇಕು ;
ನಗೆಗೊಂದು, ಬಗೆಗೊಂದು. ಹೊಸ ಕುಸುರು ಬೇಕು ;
ಹೊಸತನವೆ ಜೀವನದ ಪ್ರಗತಿಯ ರಹಸ್ಯ ;
ಹೊಸತನವೆ ಮನುಜತೆಯ ಮೈಸಿರಿಯ ಲಾಸ್ಯ !

ಹಿಂದಿನೊಳ್ಳಿತೊ ಕೆಡುಕೊ–ಅದು ಭೂತವೃತ್ತ ;
ಇಂದಿಗದು ಮುಂದಿಗದು ಬರಿಯ ಸ್ಮೃತಿಮಾತ್ರ !
ಹಳೆಹಾದಿ ನಡೆಗಲಿವ ವರೆಗೆಮಗೆ ಸಾಕು ;
ಒಲಿವುದಕೆ, ನಲಿವುದಕೆ ಹೊಸಹಾದಿ ಬೇಕು !

ದೂರದೊಳಗದೊ ಮುಗಿಲು ನೆಲವ ಮುಟ್ಟುವೊಲು
ತೋರುತಿದೆ. ನಿಜವೆ ? ಬಳಿಸಾರಿ ಪರಿಕಿಸಲು
ತೋರದೇ ಹಸನಾಗಿ ಹೊಸ ದೇಶ, ದೇಶ ?
ವೀರನಿಗೆ, ಧೀರನಿಗೆ ಸಾಹಸನಿವೇಶ !

ದಿನದಿನವು ತಿರುತಿರುಗಿ ಮನವಾರೆ ನಲಿದು,
ದಿನದಿನಕೆ ಹೊಸ ತಿಳಿವು ಹೊಸ ರೂಹುವಡೆದು,
ಕುಣಿಕುಣಿವ ಮುಗಿಲೋಳಿ ಕರೆಯುತಿದೆ ನಿನ್ನ ;
ಹೆಣವಾಗಿ ಮನೆಯೊಳಗೆ ಮಲಗುವೆಯೆ ಚೆನ್ನ ?

"ನಂದನದ ತನಿಗಂಪಸುಂಡಿದೋ ಬಂದೆ !
ಒಂದೆರಡೆ ? ಅಲ್ಲಿನಾ ಸೊಬಗೆನ್ನ ತಂದೆ !"
ಎಂದು ಕಿವಿಯೊದುತಿದೆ ಸುಳಿವ ತಂಗಾಳಿ ;
ಮುಂದಡಿಯನಿಡು, ಗೆಳೆಯ, ಧೈರ್ಯವನು ತಾಳಿ !

ಅದೊ ನೋಡು ! ಹಕ್ಕಿ ಮರಮರಗಳಲಿ ನಿಂತು
ಮೃದುಮಧುರಕಂಠದಲಿ ಕುಕಿಲುತಿಹುದಿಂತು ;–
"ಇದುವರೆಗದಾರರಿಯದೂರಿಂದ ಬಂದೆ ;
ಎದೆಗಾರ, ಬಲುಹಿದೆಯೆ ? ಬಾ, ಬೆನ್ನ ಹಿಂದೆ !"

ಎಲೆ ಪೌರುಷಧ್ವಜನೆ ! ಹಿಂದೆಗೆಯಬೇಡ ;
ಚಲಬಲದ ಸವ್ಯಸಾಚಿತ್ವವಿರೆ ಮೂಢ !,
ಗೆಲವರಿದೆ ? ನುಗ್ಗಿನಡೆ, ಹಿಗ್ಗಿನಡೆ, ಮುಂದೆ !
ತಿಳಿವುಕಡಲಿನ ಗಡಿಗೆ ನಡೆವ ಹುರುಪಿಂದೆ.

ಅಂಜದಿರು, ಗೆಳೆಯ ! ಹೊಸ ಹಾದಿಯನು ಹಿಡಿಯೆ ;
ಮಂಜುತರ ಸೃಷ್ಟಿಗಾನದಲಿ ಮೈಮರೆಯೆ ;
ಎಂಜಲಾಗದ ಮಧುರ ಮಧುರಸವ ಸವಿಯೆ ;
ರಂಜಿಸುವ ಕಾಡುಮೇಡುಗಳನಂಡಲೆಯೆ !

# ಹೊಸಬಾಳು

ಅಳಲ ಕೆಸರೊಳು ಹುಗಿದ ಹಳೆಬಾಳ ಕೊಳೆಹೆಣದ
ತಲೆಯಿಂದ ಚಿಮ್ಮುವೀ ಬೆಳಕಿದೇನು ?
ಬಳಲಿ ಬೆಂಡಾದೊಡಲ ಮರುಭೂಮಿಯೊಳು ಜೀವ
ಕಳೆಯು ಕರುವಿಡುವ ರಸದೊರತೆಯೇನು ?

ಬಗೆಮುಗಿಲ ತುರುಗಲನು ಕಳೆದು ತನ್ನೆಳನಗೆಯ
ಮೊಗವಾಡವನು ತೊಡಿಪನಾವ ಭಾನು ?
ಜಗದಗಲದಲಿ ಹೊಸತು ಹಿರಿಯಾಸೆಗಳ ಚಿಗುರ
ನೊಗೆಯಿಸುವ ಜೀವರಸವೃಷ್ಟಿಯೇನು ?

ಇದು ನನ್ನ ಹೊಸಬಾಳು ; ಕವಲು ಕವಲಾಗಿ ಹ
ಬ್ಬಿದೆ ದಿಗ್ದಿಗಂತ ಲೋಕಾಂತಗಳನು.
ಮಧುಮಾಸಮೃದುಹಾಸಗಳ ನವ್ಯಭವಿತವ್ಯ
ದುದಯವಂ ಕೂಗಿ ಕರೆಕರೆಯುತಿಹುದು !

ಬಣ್ಣಬಣ್ಣದ ಬೆಡಗು ಬಿನ್ನಾಣದಲಿ ಬರೆದ
ಹೊಂಗನಸುಗಳ ಕೋದು ತೊಡಿಸುತಿಹುದು ;
ಮಣ್ಣಿನಲಿ ಸ್ವರ್ಣವನು ಬೆದಕಲುದ್ಯೋಗಿಸುವ
ಪನ್ನತಿಕೆಯಲಿ ಮನವ ಮಿಡಿಸುತಿಹುದು.

ಹೊಸ ಹುರುಪು–ಹೊನಲಿನಲಿ ಸಾಹಸೋನ್ನತ ವೀಚಿ
ವಿಸರಗಳ ಬೆಳ್ನೊರೆಯ ಮೇಲೆ ತೇಲಿ
ಹೊಸಬಾಳು ಸಾಗುತಿದೆ, ಜಲಕೇಳಿ
ಯೆಸಗುವುದೆ ಪುರುಷಾರ್ಥವೆಂದು ಸಾರಿ !

ಹೆರವರಡಿ ಸೋಂಕದಭಿನವಮಾರ್ಗದಲಿ ನಮ್ಮ
ಪುರುಷಕಾರಜ್ಯೋತಿ ಬೆಳಗುತಿರಲು
ಪರರರಿವುಗಳ ಗಡಿಯ ಮೀರಿದಜ್ಞಾತ ಗುಹೆ
ಗಿರಿಗಳೆಡೆ ಹೊಸಬಾಳು ತಿರುಗುತಿಹುದು !

ಅಟ್ಟುದನು ತಿನದೆ ಕಹಿಯೆಂದು ಕಡೆಗಂಡು ಬಾಯ್-
ಬಿಟ್ಟು, ಹಸಿವೆಂದೊರಲಲೇಕೆ, ಹೇಳು ?
ದಿಟ್ಟಿಗಳ ಮುಗಿದು ಕುರುಡಾದೆನೆಂದಳಲು ಕೈ
ತಟ್ಟಿ ನಗರೇ, ಕಂಡುಕೇಳಿದವರು ?

ಹುಟ್ಟಿಯೇ ಕೆಟ್ಟೆನೆಂಬೀ ಭಾವದಿಂದೆ ಮರ
ವಟ್ಟು, ನೀಂ ಗೈವ ಪುರುಷಾರ್ಥವೇನು ?
ಹುಟ್ಟುಗಳ ನಾಟ್ಯರಂಗದಲಿ ಮೈಮರೆತು ಕುಣಿ
ವಷ್ಟೆ ಸಂತಸ ನಮಗೆ ಸಾಕು, ನೋಡು !

ಪುರುಷಚಿತ್ರದ ವಿಧಿಯ ಕರುಬುಗುವ ಕಣ್ಗಳನು
ಪುರುಷಕಾರದ ಕಾಂತಿ ಕೋರಯ್ಸದೆ ?
ಹರಣವನು ಮುಡಿಪಾಗಿ ಕೆಡಹಿ ಸತತೋದ್ಯಮವ
ಮೆರೆಯೆ, ತಿರೆಯೆಲ್ಲ ಬಂದೋಲೈಸದೆ ?

ತಿರೆಗೆ ಹೊರೆಯಾಗಿ ಕೊರಡಂತೆ ಕೆಡೆದರೆ ನಾಯಿ
ನರಿಗಳಿಗು ಕೀಳಾಗದೇನು, ಬಾಳು ?
ಚರಿಪ ಗಾಳಿಯೆ, ಬಿರಿವ ಹೂವೆ, ಕಿರುತಾರಗೆಯೆ,
ಹರಿವ ಹೊನಲೇ ಬೀಳುಗಳೆಯುವೇನು ?

'ಮೂರುಗಳಿಗೆಯ ಬಾಳ್ವೆ !' ಎಂದೇಕೆ ಕಣ್ಣೀರ
ಧಾರೆಯನು ಸುರಿಸಿ ಬಿಸುಸುಯ್ಯುತಿರುವೆ ?
ಮೀರಿರುವನಂತಕಾಲದ ಬೃಹಜ್ಜೀವನವೆ
ಸೇರಿಬಂದಿರುವ ರಣಧೀರನಿರುವೆ !

ಇಂದು ಹೊಸಬಾಳ ಬೆಳಗಿನೊಳೆದ್ದು ಭರದಿ ಭೋ
ರೆಂದಾತ್ಮವಿಶ್ವಾಸಕಹಳೆ ಮೊಳಗೆ,
ಮುಂದುಮುಂದಕೆ ಸಾಗು ಕಲ್ಪಕಲ್ಪಾಂತರವೆ
ಹಿಂದೆ ಸರಿದರು ನೀನು ಹಿಂಜರಿಯದೆ !

## ಗಾಳಿಯೊಡನೆ !

ಗಾಳಿಯೊಡನೆ ಗಾಳಿಯಾಗಿ
ಧೂಳಿನೊಡನೆ ಧೂಳಿಯಾಗಿ
ಮೇಲುನಾಡಿನೆಡೆಗೆ ತನ್ನ
ಮೊಗವನೆತ್ತುತೊಮ್ಮೆಗೆ ;
ಕೀಳುಬಗೆಗಳಾಳದಲ್ಲಿ
ಮುಳುಗುಮುಳುಗುತೊಮ್ಮೆಗೆ ;
ಹಾರುತಿಹುದು, ಹೊರಳುತಿಹುದು,
ನನ್ನ ಚಪಲಚಿತ್ತವು :
ತೀರದಾಸೆ ಬಾರದಾಸೆ
ಬರೆದ ವಿಕಟ ಚಿತ್ರವು !

ಕರ್ಣಧಾರನಿಲ್ಲದೊಂದು
ಹಡಗದಂತೆ ಸಾಗುತ,
ಪರ್ಣಮಾತ್ರದಂತೆ ಜಗದ
ಮಣ್ಣೊಳಿಳಿದು ಮಸುಳುತ,
ಗಳಿಗೆಗೊಂದು ಬಣ್ಣ ತಳೆವ
ಸಂಜೆಮುಗಿಲ ತೆರದಲಿ
ನೆಲೆಯ ತಿಳಿಯದಳಲುತಿಹುದು
ಹಲವುತನದ ಹೆಸರಲಿ !

ಕಂಡು ಮಾತನಾಡಿ ಮೈ
ದಡವಿ ನಗಿಸಿ ನೆಲಿವರಿಲ್ಲ ;
ಬೆಂದ ಬಗೆಗೆ ಸೊದೆಯನೆರೆದು
ಕಂಬನಿಯನು ತೊಡೆವರಿಲ್ಲ ;
ಜಗದ ಹಣತೆಗೆರಗಿ ಎರಗಿ,
ಗರಿಯು ಗರಕಿ ಸೊರಗಿ ಸೊರಗಿ,

ಆಳಲುತಿರಲು ಬಗೆಯ ಬಳಿಗೆ
ಬಂದು ನಿಲುವ ಗೆಳೆಯನಿಲ್ಲ !
ಅಣ್ಣ ಬಾರ, ತಮ್ಮ ಬಾರ,
ಚಿಣ್ಣ ಬಾರ, ಎಂದು ಕರೆದು,
ಒಂದೆ ಕರುಳ ಕುಡಿಗಳೆನಿಪ
ತನುವ ನೆರೆಯ ಮಂದಿಯಿಲ್ಲ ;
ನಲ್ಲ ಬಾರ, ಮಲ್ಲ ಬಾರ,
ಎಂದು ಒಲವನುಣಿಸಿ ತಣಿಸಿ
ಕನಸುನನಸುಗಳು ತನ್ನ
ಕರದಿ ಮಿಡಿವ ಕೆಳದಿಯಿಲ್ಲ !

ಎದೆಯ ಬರಿದುಮಾಡಿ ಕದವ
ತೆರೆದು ಬರಿದೆ ಕುಳಿತೆನು.
ಹಗಲು ಇರುಳು ಹೊರಳುತಿಹುವು ;
ಋತುಋತುಗಳು ತೆರಳುತಿಹುವು ;
ಅಲ್ಲಿ ಗಾಳಿ ಇಲ್ಲಿ ಹೂವು,
ಅಲ್ಲಿ ತೆರೆಯ ಕೂಡೆ ತೆರೆಯು,
ಮುಗಿಲು ಮುಗಿಲು, ತೊರೆಯು ತೊರೆಯು
ಸರಸವೆಸಗುತಿರುವುವು !
ಆದರೇನು ? ನನ್ನ ಬಗೆಯು
ಬರಿದು, ಬರಿದು, ನೀರವ !
ಬಾಳಲಾರೆ, ತಾಳಲಾರೆ,
ಮೌನದೊಂದು ಭಾರವ !
ಇಲ್ಲಮೆಗಳ ಉರುಲು ನನ್ನ
ಬಾಳ ಬಿಗಿಯುತಿರುವುದು !
ಆರ ನಲ್ಮೆಗೈಯು ನನ್ನ
ಬಿಡಿಸಲಿಹುದೊ ತಿಳಿಯದು.

# ಮಂದರದಿ ಮಿಡಿಯುತಿದೆ !

ಮಂದರದಿ ಮಿಡಿಯುತಿದೆ ನನ್ನ ಹೃದಯ !—ಬಿಂದು
ಬಿಂದುವಾಗಿಯೆ ಹೊಮ್ಮಿ ಹರಿವ ಕಂಬನಿಯ !

ಜಗದಗಲದಲಿ ತನ್ನ ಹಿರಿಯಾಸೆಗಳ ಹರಡಿ
ನಗುವ ನಲಿವ ಅದೊಂದು ಹೊಸತು ಮುಗುಳು,-ಭೂಮಿ
ತಾಯಿ ತಾ ಹಡೆದಿರುವ ಮುದ್ದುಮಗಳು,
ಮುಗಿದೆಸಳುಗಳು ಬಿರಿದು ನರುಗುಂಪು ಹೊರಹರಿದು
ಬಗೆಗೊಂಬ ವೊದಲೆ ಹಿಮರಾಶಿ ಸುರಿಯೆ-ಮುಗುಳು
ನೆಲನ ಕೊಳೆಯಲಿ ಕಲೆತು ಕೊಳೆತು ಅಳಿಯೆ !

ಇನಿವಣ್ಣುಗಳ ಪಡೆದು ತನ್ನ ಬಾಳನು ಮೆರೆವ
ಕನಸುಗಳ ಹೆಣೆಯುತಿರುವೊಂದು ವೊಳಕೆ,—ನೆಲನ
ಮನದಿ ಮೈದಳೆದ ಮಡಿಯಾದ ಹರಕೆ,
ಕುಡಿಗಳೊಡೆವನಿತರೊಳೆ, ಚಿಗುರು ಚಿಗಿವನಿತರೊಳೆ,
ಕುರುಡುಹುಳುವೊಂದು ಕರುಬಿಂದ ಕಡಿಯೆ-ಮೊಳಕೆ
ತಿರೆಗುರುಳಿ ಕಂಗಳನು ಮುಗಿದು ಮಡಿಯೆ !

ಆವಾವ ದೇಶಗಿರಿಗುಹೆಗಳನೊ ತೊಳತೊಳಲು-
ವಾವೇಶದಿಂದ ಹೊರಟೊಂದು ಹೊನಲು-ಭೂಮಿ
ದೇವಿಯೆದೆಯಿಂದೊಗೆದ ಬುಗ್ಗೆ ಹಾಲು,
ಒಂದೆರಡು ಹೆಜ್ಜೆ ಮುಂಬರಿವನಿತರೊಳೆ ಮುಂದೆ
ಬಂದು ತಡೆಯಲದೊಂದು ರಾಶಿಮಳಲು-ಅದರ
ದಾಹಕಾಹುತಿಯಾಗೆ ಹರಿವ ಹೊನಲು !

ನೂರು ವರುಷದ ಮಿತಿಯ ಸಂತೋಷಜೀವನವ
ಕೋರಿ ಬಂದಿರುವ ಹೆಬ್ಬಗೆಯ ಜನರು,–ಬುದ್ಧಿ
ಸಾರ ರೂಪಾಂತ ಮನಃಪುತ್ರರಿವರು !—
ಕೊಳುಕೊಳೆಂದೊರಲಿ ಬಡತನದ ಬೇಗೆಯಲಿ
ಬಾಳುವೆಯು ಕುದಿಯುತಿರೆ ನೊಂದು, ಬೆಂದು,—ಮೃತ್ಯು-
ವಾಲಯಕಕಾಲದಲಿ ತೆರಳೆ ಕಂಡು !

ಮಂದರದಿ ಮಿಡಿಯುತಿದೆ ನನ್ನ ಹೃದಯ,—ಬಿಂದು
ಬಿಂದುವಾಗಿಯೆ ಪೊಮ್ಮಿ ಹರಿವ ಕಂಬನಿಯ ! ೨೮

# ಗೆಳೆಯನಿಗೆ

ನನ್ನ ಬಾಳಬೇಗೆ ನಿನ್ನ ಬಗೆಯ ಮುಸುಕದಿರಲಿ, ಗೆಳೆಯ !
ನನ್ನ ಬನ್ನ ನಿನ್ನ ಅನ್ನದಲ್ಲಿ ವಿಷವ ಬೆರಸದಿರಲಿ ;
ನನ್ನ ಕುಂದುಕೊರತೆ ನಿನ್ನ ಜೀವದೊರತೆಯನ್ನು ಕಲಕು
ಮಲಕುಗೊಳಿಸದಿರಲಿ ; ನನ್ನ ವಿಗಡಮನದ ಪಿಡುಗು ನಿನ್ನ
ಮನವ ಸೋಂಕದಿರಲಿ, ಗೆಳೆಯ ! ಗಾಳಿಗೈಯ ಮುಗಿಲಿನಂತೆ
ಹೊನಲ ಹೊಡೆಯ ತಳಿರಿನಂತೆ, ದಾರಹರಿದ ಗಾಳಿಪಟದ
ವಿಕಟನಾಟ್ಯದಂತೆ ನಾವು ಸಾಗಬಹುದು ತಾನೆ, ಸೂತ್ರ-
ಧಾರನಿಚ್ಛೆ ತೋರಿದಂತೆ ; ಒಂದು ತೊರೆ ಹಿಮಾದ್ರಿಯಲ್ಲಿ,
ಒಂದು ವಿಂಧ್ಯಗಿರಿಯೊಳೊಗೆದು ಬಂದು ಹೊಂದುವಳಿಕೆಗಾಗಿ
ನೊಂದು ಬೆಂದರೇನು ಫಲವು ? ಕೊಂದು ಕಳೆವ ಕಟುನಿರಾಶೆ !

ಮಂದಭಾಗ್ಯರಾವು ನಿಜವು ; ಪ್ರೀತಿರಸದ ಮೃದುಮರಂದ
ದಿಂದ ಬೆಂದ ಬಗೆಯ ತಣಿಸದಾದೆವಣ್ಣ, ಮಾಡಲೇನು ?
ಬಂದ ಹಾದಿ ಬೇರೆ, ಬಂದು ನಿಂದ ನೆಲೆಯು ಬೇರೆ, ಬೇರೆ ;
ತಂದ ನಿಧಿಯು ಬೇರೆ, ಕೊಂಡುಕೊಂಡ ಸರಕು ಬೇರೆ, ಬೇರೆ ;
ಒಂದು ಒಡಲ ಬಡಬದುರಿಗೆ ಬೆಂದು ಮಿಡುಕುತಿರುವ ಕಡಲು ;
ಒಂದು ಮೆಲೆಲರ್ಗೆ ನಸುವೆ ಹೊಳಕುತಿರುವ ಸರದ ಬೆಡಗು
ಒಂದು ಶರದಚಂದ್ರನೆದೆಯ ಹಾಲನುಂಡ ಬೆಳ್ಳಿಮುಗಿಲು ;
ಒಂದು ಮರದ ಮಡಿಲ ಮರೆಯ ಕೆಂಪುತಂಪುತಳೆದ ತಳಿರು.
ಒಂದು ಹೃದಯ ಸಿಂಧುವಿನಲಿ ಮುಳುಗಿ ತನ್ನ ತಾನೆ ಮರೆತ
ವಿಚಲಜೀವ ; ಒಂದು ಬಾಳ ಬಯಲಿನಲ್ಲಿ ತನ್ನ ನೆಲೆಯ
ಬೆಲೆಯನರಿತು ಸ್ಪಷ್ಟಭಾವಗಳಲಿ ನೆಟ್ಟ ಬಗೆಯ ಜೀವ !
ಅಳಲ ಬಿತ್ತಿ, ಅಳಲ ಬೆಳೆದು ಅದನೆ ಲೋಕಕೀವುದೊಂದು,
ನೆಲದ ನಲವಿನೊರತೆಯಲ್ಲಿ ಮಿಂದು ನಿಂದ ಜೀವವೊಂದು !

–ಎರಡರೊಳಗೆ ಹೊಂದುವಳಿಕೆ–ಅದುವೆ ಮುಗಿಲ ಹೂವಲಾ !
ಕರಗುತಿಹುದು ಹೃದಯ ; ಮೂಕವಾಗುತಿಹುದು ಭಾವ ಜೀವ ;
ಆದರೇನು ? ನನಗೆ ನಿನಗೆ ತಾಳ ಬೇರೆ, ತಂತಿ ಬೇರೆ !
ಅದಕೆ ಪದವನಿಟ್ಟು, ತಾಳಗತಿಗೆ ಕುಂದು ಬರದ ಹಾಗೆ
ಕುಣಿಯುಬೇಕು, ಮಣಿಯಬೇಕು, ತಣಿಸಬೇಕು ಬಾಳ ಬೇಗೆ ! ೨೮

# ಮೈವೆತ್ತ ಲಾಲಿತ್ಯ

ಮೈವೆತ್ತ ಲಾಲಿತ್ಯವನು ಕಂಡೆ ನಾ ಮೊನ್ನೆ–
ಭಾವಜೀವಗಳ ಸಂಸ್ಕಾರಸಾಕಾರವನು,
ನವ್ಯತೆಯ ಮರ್ಮವನು ಭವ್ಯತೆಯ ಕರ್ಮವನು,
ಕಾವ್ಯಕಮಲದ ಮಧುರ ಮಕರಂದಸಾರವನು,
ಜೀವನಪಯೋನಿಧಿಯ ಪೀಯೂಷಪೂರವನು.

ಬಿಳುಪುಕೆಂಪುಗಳಮಳುಬೆಳಸವಳ ಮೈಸೊಬಗು ;
ಮೆದುಪುತಂಪುಗಳವಳಿನಲಿವವಳ ಬಗೆಬೆಡಗು ;
ಚೆಲುವಿಕೆಯ ನರುಗಂಪನಿಡಿಕಿರಿದ ಮೈಮುಗುಳು ;
ಒಲವುನಲವಿನ ದಡವನೆರಡನಪ್ಪುವ ಹೊನಲು ;
ಸಲುಗೆಸಲ್ಲಾಪಗಳ ಕಿರುದೆರೆಯ ಹಿರಿಗಡಲು.

ಎಲರಿನಲೆಯಲೆಯೊಡನೆ ನಲವೇರಿ ತಲೆಯೊಲೆದು,
ಉಲಿವ ಮಧುಪಾವಳಿಯ ಗಾಪಳಿಗೆ ಕಿವಿದೆರೆದು,
ಹಿರಿದು ಕಿರಿದೆನ್ನದೆಲ್ಲಕು ಸೊದೆಯನೆರೆದೆರೆದೆರೆದು,
ಬಳಿಸುಳಿವವರ ನೋಡಿ ನಕ್ಕು ನಲಿಯಿಸಿ ನಲಿದು,
ಒಳಗಂಪನೆದೆತಂಪನೆದೆಗೊಳಿಪ ಹೂವವಳು.

ತಿಳಿಗೊಳದ ಹಾಗೆ ತನ್ನೆದೆಗೆ ಕನ್ನಡಿ ಹಿಡಿದು,
ಬಳಿಸಾರಿದವರ ಕಣ್ಗಳನಲ್ಲಿ ಸೆರೆಹಿಡಿದು,
ನೆಲಮುಗಿಲ ಚೆಲುವನೇ ತನ್ನೊಡಲಲೊಳಿಡಿಕಿರಿದು,
ಸೆಳೆಮಿಂಚಿನಂತೆ ಅಲ್ಲಲ್ಲಿ ಮಿರಿಮಿರಿ ಮಿಂಚಿ
ಸೆಳೆದಪಳು ಲೋಕವನೆ ನಲವನೆಲ್ಲೆಡೆ ಹಂಚಿ.

ಅವಳಿರುವಳೆಲ್ಲಿ ದುಗುಡವೆ ಸುಳಿಯದಲ್ಲಲ್ಲಿ ;
ಅವಳೆದೆ ಪಳಂಚಿದರೆ ರಸ ಬಹುದು ಕಲ್ಲಲ್ಲಿ !
ಅವಳ ನಗೆ ಮುಗುಳುತಿರೆ ಹೊಗೆವೆದೆಗೆ ಸೊದೆಯ ಸ್ಮೃತಿ ;
ಅವಳ ಕಣ್ಕುಣಿಯುತಿರೆ ಎದೆಎದೆಯು ತಾಳಗತಿ ;
ಅವಳ ನುಡಿ ಮಿಡಿಯುತಿರೆ ಮಿಡಿದಪುದು ಜೀವತತಿ !

ಕಂಡವರ ನಯನಗಳಿಗವಳದೊಂದೇ ನೆನವು ;
ಬೆಂದೆದೆಗೆ ಕೊನೆವರೆಗೆ ಚೆಲುವಿದೊಂದೇ ತಣಿವು ;
ತಿಳಿವವರ ತಿಳಿವುಗಣ್ಣಿನ ಕೊನೆಯ ಹೊಂಗಣಸು ;
ನೆಲದವರ ಕನಸು, ಮುಗಿಲವರಿಗೂ ಸಿಗದುಣಿಸು.
ಮೈವೆತ್ತ ಲಾಲಿತ್ಯವನು ಕಂಡೆ ನಾ ಮೊನ್ನೆ—.

## ಕಲ್ಲಾಗು, ಕಲ್ಲಾಗು !

ಕಲ್ಲಾಗು ಕಲ್ಲಾಗು ! ಬಾಳ ಬಿರುಗಾಳಿಯಲಿ
ಅಲ್ಲಾಡದೆಯೆ ನಿಲ್ಲು ನಿಲ್ಲು, ಜೀವ !
ನೆಲೆಯಿಲ್ಲದಲೆದಾಟ ಎನಿತು ವರೆಗೆ ?–ಬಯಲು
ದೊರೆಯ ಬೆಂಗಡೆಯೋಟ ಯಾವ ಸುಖಕೆ ?
ಮೇಲುಪುತಣುಪುಗಳ ಸುಖಸಂಭ್ರಮದ ಬಾಳುವೆಯ
ಬಯಕೆಯನು ಬಿಸುಡಯ್ಯ ನೀನು ದೂರ !
ಹುಲ್ಲುಗಿಡಗಳಿಗಿಲ್ಲ ಇಲ್ಲಿ ತಾಣ ;
ಬಳ್ಳಿಹೂಗಳ ಬಾಳಿಗಿಲ್ಲ ಮಾನ ;
ಕಲ್ಲಿಗೊಂದೇ ಇಲ್ಲಿ ಸ್ಥಾನ, ಮಾನ !

ಗಿಡಮರಗಳನು ತೂಗಿ ತೂಗಿ ತೊತ್ತಳದುಳಿದು
ಹೂಬಳ್ಳಿಗಳನು ಹುಟ್ಟಳಿಯೆ ಹೊಡೆದು,
ಎಲ್ಲವನು ಮಣ್ಗೂಡಿಸುವೆನೆಂದು ಬೊಬ್ಬಿರಿದು
ಬಿರುಗಾಳಿ ಬಂದು ಮೊರೆಮೊರೆಯ ಬಹುದು ;
ಹುಬ್ಬು ಗಂಟಿಕ್ಕಿ ಗುಡುಗುಡಿಸಿ ಬಾನ್ ಸಿಡಿಸಿಡಿದು
ಸಿಡಿಲಾಗಿ ಬಂದು ಬಂದೆರಗಬಹುದು ;
ಕಾಳಮೇಘಾಳಿ ರೋಷಾಗ್ನಿಯಲಿ ಕುದಿಕುದಿದು
ಮಳೆಯಾಗಿ ಬಂದು ತಳ್ಪೊಯ್ಯಲಿಹುದು ;
ಮುನಿದ ಬಿಡುಗಣ್ಣ ರಂಭೋದತೂಣೀರದಿಂ
ಮಿಂಚುಗಳ ಬಾಣಗಳನೆಸೆಯಬಹುದು :
ಆದರೂ ಬೆದರದಿರು ನೀನೊಳಗು ಹೊರಗು !
ಅಳುಕದೆಯೆ, ಬಳುಕದೆಯೆ, ನಿಲ್ಲು ಕೊನೆವರೆಗು !

ಬಳಿಯ ಕೋಗಿಲೆ ಕೂಗಿ ಕರೆಯ ಬಹುದು ;
ಅಳಿಮಾಲೆ ಬಂದು ಮೊರೆಮೊರೆಯ ಬಹುದು ;

ಮೆಲೆಲರು ಬಂದು ಮೈದಡಹಬಹುದು ;
ಚೆಲುವಾಗಿ, ಒಲವಾಗಿ ಹೂವದೊಂದು
ಬಲವಾಗಿ ಮನಸೆಳೆಯಲೆಳಸಬಹುದು !
ಆದರೂ ಬದಲದಿರು, ಕದಲದಿರು, ನೀನು !
ಮೋಹಮಾಯೆಗೆ ಸಿಲುಕದೆಯೆ ನಿಲ್ಲು, ನಿಲ್ಲು !

ಹೂವಾಗಿ ತನ್ನೆದೆಯ ಮಧುರ ಮಕರಂದವನು
ದಿಕ್ಕುದಿಕ್ಕಿಗೆ ಚೆಲ್ಲುವಾಸೆ ,
ಮುಗಿಲಾಗಿ ಹನಿಯಾಗಿ ಜಗದ ಕಂಬನಿಯಾಗಿ
ಮಣಿಯಾಗಿ ಕುಣಿಯುವಾಸೆ ;
ಅಳಿಯಾಗಿ ಗಿಳಿಯಾಗಿ ನೂರಾರು ಬಗೆಯಾಗಿ
ನಗೆಯಾಗಿ ನಲಿಯುವಾಸೆ,–
ನಿನ್ನೊಳಿರಬಹುದಯ್ಯೊ, ಮಾಡಲೇನು ?
ಅದು ಮುಗಿಲ ಹೂವದನು ಮುಡಿವೆಯೇನು ?

ಮೃದುವಾಯ್ತು, ಕುಸುಮಕೋಮಲವಾಯ್ತು ಮನ ; ಜೀವ–
ಕಾರುಣ್ಯರಸಕೆ ಸೆಲೆಯಾಯ್ತು ಹೃದಯ ;
ಬಾಳು ಸಂಸ್ಕೃತಿಮಧುರ ; ಕಾವ್ಯನಂದನದ ಚಿರ
ಸಂಚಾರಿಯಾದೆ, ಹೇ ಮತ್ತ ಮಧುಪ !
ಅವನಲ್ಲಿ, ಇವನಲ್ಲಿ, ಅದರಲ್ಲಿ, ಇದರಲ್ಲಿ
ತನ್ನತನವನು ಕಂಡುಕೊಂಡ ಭೂಪ !
ಸಚರಾಚರದ ಬಾಳಿನಾಳದಲಿ ಮುಳುಗಿ ಮುಳುಗಿ
ಬಂತು ಅಂತಃಕರಣ ; ಅಯ್ಯೊ ಪಾಪ !
ಆದರೇನಂತೆ ಮನವಾಯ್ತು ಅಬಲ ;
ಗಾಳಿಗೊಡ್ಡಿದ ತಳಿರಿನಂತೆ ಚಪಲ !
ಇದು ವಿಧಿಯ ನಿಷ್ಠುರದ ರಾಜ್ಯಭಾರ–ಇಲ್ಲಿ
ಮೃದುತೆ ಬಲಹೀನತೆಗೆ ಸಂಚಕಾರ !

ಅಕ್ಕಟಾ ! ಬೇಕಾದುದೇನು, ಬಂದೀ ಭವದಿ ?
ಮರುಳು ಕರುಳಿನ ಕುರುಡು ಕುಣಿತವಲ್ಲ !
ತನುಮನವನುಕ್ಕಾಗಿ ಕಾಯಿಸುವ ದುರ್ದಮ್ಯ
ಶಕ್ತಿ ; ಬಯಲಾಸೆಗಳ ಗುಣಿತವಲ್ಲ !
ಅದಕಾಗಿ ಕಲ್ಲಾಗು,–ಕಠಿನ, ಕಠಿನ !
ಮಿದುವಾಗಬೇಡ ; ಹಾ ! ಜತನ ಜತನ !

ಕಲ್ಲಾಗು, ಕಲ್ಲಾಗು ! ಬಾಳ ಬಿರುಗಾಳಿಯಲಿ
ಅಲ್ಲಾಡದಿರು ನಿಲ್ಲು, ನಿಲ್ಲು, ಜೀವ !
ಎನಿತುವರೆಗೀ ಬರಿಯ ಬವಣೆಯಕಟಾ ! ಬಾಳಿ–
ಗಿಲ್ಲ ಸ್ಥಿರತೆಗು ಮಿಗಿಲು ಮಿರುಪ ಮಕುಟ !
ಕರಗದಿರು ಬಿಸಿಗಿಟ್ಟ ಬೆಣ್ಣೆಯಂತೆ,
ರವಿಕಿರಣ ಮುದ್ದಿಡುವ ಮಂಜಿನಂತೆ,
ಬಾಡದಿರು ನೆಲಕಿಳಿದ ಮಲರಿನಂತೆ,
ಬಾಗದಿರು ತೊನೆತೊನೆವ ಬಳ್ಳಿಯಂತೆ ;
—ಕಲ್ಲಾಗು, ಕಲ್ಲಾಗು !

## ನಿನಗೆ ನೀನೇ !

ನಿನಗೆ ನೀನೇ, ಗೆಳೆಯ, ನಿನಗೆ ನೀನೇ !
ಅವರಿವರ ನಂಬುಗೆಯ ಮಳಲ ರಾಶಿಯ ಮೇಲೆ
ಬಾಳ ಮನೆಯನು ಮುಗಿಲಿಗೆತ್ತರಿಸಲಿಹೆಯಾ ?
ನಿನಗೆ ನೀನೇ, ಗೆಳೆಯ, ನಿನಗೆ ನೀನೇ !

ಮನ ಸಿಡಿದು ಹೋಳಾಗುತಿರುವ ವೇಳೆ,
ಕನಸುಗಳ ಗುಳ್ಳೆಗಳು ಒಡೆದೊಡೆದು ಬೀಳೆ,
ಜನುಮದೀ ರಿಂಗಣದಿ ಕಾಲುಗಳು ಸೋಲೆ,
ನಿನಗೆ ನೀನೇ, ಗೆಳೆಯ, ನಿನಗೆ ನೀನೇ !

ಚೆಲುವಿಕೆಯ ಹುಚ್ಚೊಳೆದೆ ಕೊಚ್ಚಿ ಹೋಗುತಿರೆ,
ಒಲವು ವಿರಹದ ಬೆಂಕಿಯಲ್ಲಿ ಬೇಯುತಿರೆ,
ಗೆಳೆತನಕೆ ಹುಳಿಬಂದು ಹೆಪ್ಪುಗಟ್ಟುತಿರೆ,—
ನಿನಗೆ ನೀನೇ, ಗೆಳೆಯ, ನಿನಗೆ ನೀನೇ !

ತೋಟದಲಿ ಗಿಡಗಿಡಕೆ ಹೂವರಳಿ ನಿಲ್ಲೆ,
ಮಕರಂದದುತ್ಸವವು ಬಿತ್ತರಿಸುವಲ್ಲೆ
ಮರಿದುಂಬಿ ಸಾಲೇನು, ಅರಗಿಳಿಯ ಮಾಲೆ !
ಬರೆ ಮಾಗಿ, ಬರಿತೋಟ, ಭಣಗುಡುವುದಲ್ಲ !
ನಿನ್ನ ಬಗೆ ನಗೆಯಾಗಿ ಹರಿದು ಬರುತಿರಲು,
ಸಂತಸದ ಸಂಗೀತ ಹೊನಲಿಡುತಲಿರಲು.
ಏನೊಲವು ಏನು ಕೆಳೆ, ಎಂಥ ಸುಮ್ಮಾನ !
ಏನಾಟ, ಏನೂಟ, ಎಂಥ ಸಮ್ಮಾನ !

ನಿನ್ನ ಕರುಳನು ಕೊರಗುಹುಳು ಕಡಿಯುತಿರಲು,
ನಿನ್ನ ಮನದಿ ನಿರಾಶೆ ಮಂಜು ಮುಸುಕಿರಲು,
ಮೊಗದಿ ಕಾರ್ಮುಗಿಲೋಳಿ ದಾಳಿಗೊಂಡಿರಲು,
ಎಲ್ಲೊಲವು, ಎಲ್ಲಿ ಕೆಳೆ, ಎಲ್ಲಿ ಸುಮ್ಮಾನ ?
—ನಿನಗೆ ನೀನೇ ತ್ರಾಣ, ಮಾನ, ಸಮ್ಮಾನ !

ಜಗವೆಲ್ಲ ನಗೆಯ ಹೊಳೆಯಾಗಿ ಗುಳುಗುಳಿಸೆ,
ಸೊಗವಲ್ಲಿ ಸೊಗವಿಲ್ಲಿ, ಬಂದು ಗಮಗಮಿಸೆ,
ಹುಣ್ಣಿಮೆಯ ದಿನದ ಗವಿಯೊಡಲಂತೆ ಮನವು
ತನ್ನ ಕತ್ತಲೆಗಂಜಿ ತನ್ನೊಳಡಗಿರಲು,—
ನಿನಗೆ ನೀನೇ, ಗೆಳೆಯ, ನಿನಗೆ ನೀನೇ !

ಕವಲುದಾರಿಯ ಮುಂದೆ ನೀ ಬಂದು ನಿಂದು
ಗುರಿ ಯಾವುದೆಂದು ಮುಂಗಾಣದಿರೆ ನೊಂದು
ಮನದ ಪೊರೆಪೊರೆಯೊಳುರಿಯೆದ್ದು ಭುಗಿಲಿಡಲು
ನಿನಗೆ ನೀನೇ, ಗೆಳೆಯ, ನಿನಗೆ ನೀನೇ !

ನಿನ್ನೆದೆಯ ಮಾತು ನಿನ್ನೆದೆಯೊಳುಳಿದಿರಲು
ಅದರ ತಿರುಳನು ತಿಳಿವ ಮನ ಸುಳಿಯದಿರಲು
ಮಾತುಮಾತಿಗು ವಾದ ಹೆಡೆಯೆತ್ತಿಬರಲು
ಅದರ ವಿಷಕೀ ಜೀವ ಬೆಂದುಹೋಗಿರಲು,
ನಿನಗೆ ನೀನೇ, ಗೆಳೆಯ, ನಿನಗೆ ನೀನೇ !

"ನೀನೆ ನಿನ್ನಯ ಬಂಧು, ನೀ ನಿನ್ನ ಶತ್ರು,"
ನೀ ರಸಿಕ, ನೀನೆ ಹಾ ! ರಸಿಕತೆಯ ವಸ್ತು ;
ಸ್ವರ್ಗನರಕದ ಆಳಲುನಲವುಗಳ ಬಿತ್ತು,
ನೀನೆ ಬಾಳುವೆಯಿರುಳು, ನೀ ನಿನ್ನ ಹೊತ್ತು ;
ನಿನ್ನೆದೆಯೆ ಪಾಡೆ ನಿನ್ನೊಲಯಿಸುವ ಹಾಡು ;

ನಿನ್ನೊಡಲ ನಾಡೆ ನಿನ್ನೈಸಿರಿಯ ಬೀಡು.
ನಿನಗೆ ನೀನೇ, ಗೆಳೆಯ, ನಿನಗೆ ನೀನೇ !–

ಬಾಳ ಕಾಳೆಗದಲ್ಲಿ ಏಕಾಂಗಿ ವೀರ !
ನೇಹನಲುಮೆಗಳೆದೆಗೆ ಬರಿಯ ಆಹಾರ ;
ನಿನ್ನ ಅಂತಃಸತ್ವಸಾರ ಆಧಾರ !
ಉಳಿದೆಲ್ಲವೂ ಬೆಸಕೆ ಬರದ ಸಿಂಗಾರ !
ನಿನ್ನಾತ್ಮದಿದಿರು ನೀ ನಿಂತಿರುವ ವೇಳೆ,
ಆತ್ಮಸಾಕ್ಷಿಗೆ ಸಾಕ್ಷಿಗೂಡುತಲಿರೆ ಬಾಳೆ ;
ಮೃತ್ಯುವಿನ ಹಿಡಿತ ಬಿಗಿಯಾಗುತಿರೆ, ಮೇಲೆ
ಕಿರುತಾರಗೆಯದೊಂದು ಓರಗೆಯ ಕೋರೆ,
ನಿನಗೆ ನೀನೇ, ಗೆಳೆಯ, ನಿನಗೆ ನೀನೇ !

ದೂರದೂರದ ಮಾತು, ಗೀತ ಹರಿತಂದು
ಮರೆತ ಬಾಳಿನ ಕುದಿತ ಮನದಿ ನೆಲೆನಿಂದು,
ಭವದ ಬಣ್ಣದ ಗಾಜೊಳಾಗಾಗ ದಿವದ
ಸಪ್ತವರ್ಣದ ಕಾಂತಿ ಕೋರೈಸೆ ಕಣ್ಣ,
ಬಳಿಕೆಲ್ಲ ಬಾಳುದ್ದ ಕಾರಿರುಳು ಕವಿಯೆ,
ನಿನಗೆ ನೀನೇ, ಗೆಳೆಯ, ನಿನಗೆ ನೀನೇ !

ಒಂಟಿ ಮುಗಿಲದೊ, ನೋಡು, ಬಾನ ಬಯಲಿನಲಿ
ತನ್ನೆದೆಯ ರಸದಲ್ಲಿ ತಾನೆ ಕರಕರಗಿ
ತನ್ನೆದೆಯ ಹಾಡೊಳೇ ತನ್ನ ಮೈಮರಸಿ
ಯಾವೆಡೆಗೆ ಸಾಗುತಿದೆ,-ಏನನಾಧರಿಸಿ ?
ಆ ಹಾರುಹಕ್ಕಿಯನು ಕಂಡಿಲ್ಲವೇನು ?
ಯಾವ ಮರ, ಯಾವ ಗಿಡವೆಲ್ಲಾದರೇನು ?
ತನ್ನ ರೆಕ್ಕೆಯ ನಂಬುಗೆಯನೊಂದೆ ಬೆಳೆದು
ತನ್ನ ಬಾಳನು ತನ್ನ ಹಿಡಿತದಲಿ ಬಿಗಿದು

ತನ್ನ ಪಾಡನು ತಾನೆ ಹಾಡಿ ಸವಿಸವಿದು
ಸಾಗುತಿದೆಯಲ್ಲ ; ಅದಕಿನ್ನಾವ ನೆಚ್ಚು ?
ನಿನ್ನೆದೆಯ ಬಲವೊಂದೆ ನಿನ್ನ ಬೆಂಬಲವು ;
ನಿನ್ನ ಚಿತ್ಕಳೆಯೊಂದೆ ನಿನ್ನ ಹಂಬಲವು !
ನಿನ್ನೆದೆಯ ಮಧುರಿಮೆಯೆ, ನಿನ್ನೊಲವಿನುರಿಯೆ,
ನಿನ್ನ ತ್ಯಾಗದ ಸೊಗವೆ, ರಾಗದುಬ್ಬೆಗವೆ ;
ನಿನ್ನೆದೆಯನೇ ಹಿಳಿದು ಹಿಳಿದದನು ಮೆದ್ದು
(ನಿನ್ನೊಡಲ ಯಾತನೆಗೆ ಅದೆ ಹಿರಿಯ ಮದ್ದು !)
ನಿನ್ನ ಮರುಕದ ಅಗ್ನಿದಿವ್ಯದಲಿ ಗೆದ್ದು
ಮೇಲೆ ಬಾ ಹೂವಾಗಿ, ಜೇನಾಗಿ ಪುಟಿದು
ತೇಲಿ ಬಾ, ಬೆಳ್ಮುಗಿಲ ತುಣುಕಾಗಿ ನೆಗೆದು
ಬಾನೆತ್ತರಕು ಜಗದ ಬಿತ್ತರಕು ಬೆಳೆದು ;
ಅದೆ ಸಾಧನೆಯೂ, ಸಾಧ್ಯ ;–ಅದೆ ಬಾಳಿನೊಸಗೆ ;
ನಿನಗೆ ನೀನೇ, ಕೊನೆಗು, ನೀನೆ ನಿನಗೆ ! ಅಶ

# ಓಡಲೆಳಸುತಿಹುದು ಜೀವ

ಓಡಲೆಳಸುತಿಹುದು ಜೀವ ದೂರ, ದೂರ, ಜನವಿದೂರ
ವಿಪಿನದೆಡೆಗೆ,
ಗಾಢಾಂಧಕಾರ ಕವಿದ ಕಗ್ಗವಿಯ ಒಡಲಿಗೆ ;
ಮಿನುಗುತಾರೆ, ನಗುವ ಚಂದ್ರ,
ಕುಣಿವ ವೀಚಿಮಾಲೆಗೆ.

ನೇಹ, ಮೋಹ, ನಗುವು, ಅಳುವು ಇಲ್ಲದೊಂದು ಬೀಡಿಗೆ ;
ತನ್ನತನದ ಕೋಟೆಗಿನಿಸು ಲಗ್ಗೆ ಬಾರದಿರುವೆಡೆ ;
ಎದೆಯ ಹೊಳೆಗೆ ಕೊಳಕು ತೊರೆಗಳೊಂದೂ ಸೇರದಿರುವೆಡೆ–
ಒಡಲೆಳಸುತಿಹುದು ಜೀವ.

ಮೌನಶರಧಿತಳದಿ ಮುತ್ತಿನಂತೆ ಮಲಗಲೆಳಸಿದೆ ;
ಗವಿಯೊಡಲಿನ ರನ್ನದಂತೆ ತನ್ನ ತಾನೆ ಬೆಳಗ ಬಯಸಿದೆ ;
ಏಕಾಂತದ ಶಾಂತಿರಸಕೆ ಬಾಯಾರಿ ನಿಂತಿದೆ.

ಕಲಹ, ಕಪಟ, ಕುದಿತ, ಮಿದಿತ,
ಅಳಲು, ಅಳುವು, ಕೋಪ, ತಾಪ–
ಇವಕೆ ಇಗೋ ಹೇಸಿದೆ ;
ಒಲವು, ನಲವು, ಸರಸ, ಹಾಸ,
ಮಾತುಕತೆಯೂ, ಆಟ, ಬೇಟ-
ಅವೂ ಬೇಸರೆನಿಸಿವೆ !

ಭಾರವಾಗುತಿಹುದು ನೇಹ, ಕೋಳವೆನಿಸುತಿಹುದು ಪ್ರೇಮ ;
ಗಾಳವೆನಿಸುತಿಹುದು ಬರುವ ದಯಾದ್ರ್ದೃಷ್ಟಿಸಂಕುಲ ;
ಬೆಳೆಯಲೆಳಸುತಿಹುದು ಮನವು,
ಬೆಳಗ ಬಯಸುತಿರುವುದಾತ್ಮ ;

ಇಲ್ಲಿ ಬಾಳಿ, ಇಲ್ಲಿ ಬದುಕಿ,
ಮೋಹದ ಸುಳಿಯೊಳಗೆ ಸಿಲುಕಿ,
ನೇಹದ ತುಮುಲಕ್ಕೆ ಅಳುಕಿ,
ಎದೆಗೆ ಎದೆಯು ತಾಗಿ ತಾಗಿ
ನೆಗೆವ ವಹ್ನಿ ಜ್ವಾಲೆಯಲ್ಲಿ
ಹಿರಿಹಂಬಲನೆಲ್ಲವ,
ಒಳ್ಗುರಿಗಳನೆಲ್ಲವ
ಸುಟ್ಟುಬಿಡಲೆ, ಕೊಟ್ಟುಬಿಡಲೆ,
ಅವಕೆ ಕೊನೆಯ ತರ್ಪಣ ?

ಬಾಳ ಹೂವು ಬಾಡದಿರಲು,
ಮನದ ಆಸೆ ಅಳಿಯದಿರಲು
ಕನಸೆಲ್ಲವು ನಸುವಾದರು
ನನಸಿಗಿಳಿದು ಬರುವೊಡೆ,
ಮನದ ಆಳಕಿಳಿಯಬೇಕು ;
ಆ ಗುಹಾಂತರಾಳದಲ್ಲಿ
ತನ್ನತನದ ರನ್ನವನ್ನು ಎಂತಾದರು ಪಡೆಯಬೇಕು ;–
ಅದಕಾಗಿಯೆ,
ಓಡಲೆಳಸುತಿಹುದು ಜೀವ ದೂರ ದೂರಕೆ,-
ಸಣ್ಣ ಒಲವು, ಸಣ್ಣ ನೇಹ, ಸಣ್ಣ ಬಯಕೆ, ಸಣ್ಣ ಹರಕೆ-
ಇವುಗಳಿಂದ ದೂರಕೆ,–
ನೀಲಮುಗಿಲ, ಗಹನವಿಪಿನ, ಹಿರಿಗಡಲಿನ ವಿಸ್ತಾರಕೆ ;
ಓಡಲೆಳಸುತಿಹುದು ಜೀವ
ದೂರದೂರಕೆ !

# ನನ್ನ ನಿನ್ನ ಬಳುವಳಿ

ಮೂಕಶೋಕವೊಂದೆ, ವಿರಹವೊಂದೆ, ಆರದಾಸರೇ
ನನ್ನ ನಿನ್ನ ಬೆಂಬಳಿ;
ಏಕಾಂತದ ಮರುಕವೊಂದೆ, ಲೋಕಾಂತದ ಮುರುಕವೊಂದೆ,
ಒಲವಿನಗ್ನಿ ಕುಂಡವೇ, ಒಡಲ ಕುದಿವ ಭಾಂಡವೇ,
ಕರಕುತಿರುವ ಬಾಳಿನಾಶೆಯೊಂದು ಕನಲುಕೆಂಡವೇ
ನನ್ನ ನಿನ್ನ ಬಳುವಳಿ.

ಬಾಳುದ್ದವು ನವೆದರೂ,
ಭವಭವಗಳು ಸವೆದರೂ,
ಜೀವವೆದ್ದು ನೂರುಜಿದ್ದಿನಲ್ಲಿ ಬಿದ್ದು ಗೆದ್ದರೂ,
ತೀರದಂಥ ಹಂಬಲೊಂದೆ,
ಬಾರದಂಥ ಭಾಗ್ಯವೊಂದೆ,
ಮೈಮೀರಿದ ಮಾಯೆಯೇ,
ಕೈಮೀರಿದ ಛಾಯೆಯೇ,
ನನ್ನ ನಿನ್ನ ಬೆಂಬಳಿ.

ಸುತ್ತುತಿಹುದು ನಿನ್ನ ಸುತ್ತ, ನನ್ನ ಚಿತ್ತಭೃಂಗವು;
ಈ ಒಡಲು ಕಡಲು ವ್ಯೋಮ-ಭೂಮ ನಮ್ಮ ಪ್ರೇಮರಂಗವು !
ಅಲ್ಲಿ ಸುತ್ತು ಮುತ್ತು ಮುಳ್ಳು ನಡುವೆ ಒಲವು ಕುಸುಮವು;
ಅಲ್ಲಿ ನಾವು ಹೊರಳಿಯುರುಳಿ ಸೆತ್ತರಲ್ಲಿ ನೊಂದರೂ,
ಹೂವಿನೊಂದು ಕಂಪೆ, ತಂಪೆ, ಸೊಂಪೆ ನಮ್ಮ ಆಸತು !

ಅಲ್ಲಿ ಎಲ್ಲೊ ದಿಗ್ದಿಗಂತದಂಚಿನಂಚಿನಾಚೆಗೆ
ಚೊಕ್ಕಚಿಕ್ಕೆಯತಳನುಟ್ಟ ನೀಲದಾಳದಾಚೆಗೆ
ಎಲ್ಲಿ ಒಲವೆ ಒಲವು ನಲವೆ ನಲವು ಎತ್ತಲೆತ್ತಲೂ

ಅಲ್ಲೆ ನಮ್ಮ ಕೊಟದೊಂದು ಕನಸಿನೊಂದು ಕಬ್ಬವು-
ಬೆಳೆಯುತಿಹುದು ನಮ್ಮ ಬಾಳಿನೊಂದು ಹಿರಿಯ ಹಬ್ಬವು !

ಆದೊಡೀಚೆಗೀಚೆಗಿಲ್ಲಿ ಒಂದೆ ಒಂದೆ ಪಲ್ಲವಿ :-
ಮೂಕಶೋಕವೊಂದೆ, ವಿರಹವೊಂದೆ, ಆರದಾಸರೇ
ನನ್ನ ನಿನ್ನ ಬಳುವಳಿ ! ೨೭

# ಜಗವೆಲ್ಲ ಸುಳ್ಳು !

ಅವರಿಲ್ಲ, ಇವರಿಲ್ಲ, ಜಗವೆಲ್ಲ ಸುಳ್ಳು !
ನಾನು-ನೀನೆಂಬುದೊಂದೇ ನಿಜದ ಸೊಲ್ಲು ;
ನಾನು ನೀನಿರುವೆಡೆಯೆ ನಂದನಕು ಮಿಗಿಲು ;
ಅಲ್ಲಿ ನಿತ್ಯವಸಂತ ; ಕೋಗಿಲೆಯ ಹುಗಿಲು !

ನಿನ್ನ ಮನವನು ಕತ್ತಲಲ್ಲಿ ಹೂಳು ;
ಮರೆತುಬಿಡು ; ಬಾಳುವೆಯು ಬರಿಯ ಗೋಳು !
ಒಲವೊಂದೆ ಬೆಸನಾಗಿ ಇಲ್ಲಿ ಮೈತಾಳು ;
ನೋಡಿದೋ, ನಾಕವಾಯಿತು ನಮ್ಮ ಬಾಳು !

ಮಾತುಗಳಿಗಿಲ್ಲ ಕೊನೆ ; ಇರಲಿ ಮೌನ !
ಬೇಟವಲ್ಲದೆ ಬೇರೆ ಬೇಡ ಜ್ಞಾನ ;
ಒಲವಲ್ಲದೆ ಬೇರೆ ಬೇಡ ತ್ರಾಣ ;
ಒಡಲಲ್ಲದಿನ್ನೇಕೆ ಬೇರೆ ತಾಣ ?

ಗಾಢವಾಗಲಿ ಇನ್ನು ಬಾಹುಬಂಧ !
ಮೂಡಿ ಮುಳುಗಲಿ ಅಲ್ಲಿ ಸೂರ್ಯಚಂದ್ರ.
ಅಮೃತವನು ಕೊಡು, ಕೊಳ್ಳು ; ಬೇಡ ಶಂಕೆ.
ನಿಶ್ಚಿಂತರಿಗೆ ಎಲ್ಲಿ ಯಾವ ಅಂಕೆ ?

ನಿನ್ನ ಕೊನೆಯಿರದ ಕತ್ತಲಿನಲ್ಲಿ ಕರಗುವೆನು,
ಇಳಿಯುವೆನು ಬಾಳಿನಾಳ ;
ಅಲ್ಲಿ ಹರಿಯದೆ ತಡೆದು ಇಡಿಯಾಗಿ ಮಡಿಯುವೆನು
ನಿರ್ಮಾನ, ನಿರೀಹ, ನಿಷ್ಕಾಳ !

## ಇದು ಬಾಳು!

ಅಳುವ ಕಡಲೊಳೂ ತೇಲಿ ಬರುತಲಿದೆ
ನಗೆಯ ಹಾಯಿದೋಣಿ ;
ಬಾಳಗಂಗೆಯ ಮಹಾಪೂರದೊಳೂ
ಸಾವಿನೊಂದು ವೇಣಿ
ನೆರೆತಿದೆ, ಬೆರೆತಿದೆ ; ಕುಣಿವ ಮೊರೆವ
ತೆರೆತೆರೆಗಳೋಳಿಯಲ್ಲಿ
ಜನನ ಮರಣಗಳ ಉಬ್ಬುತಗ್ಗು ಹೊರ
ಳುರುಳುವಾಟವಲ್ಲಿ !

ಆಶೆಬೂದಿತಳದಲ್ಲು ಕೆರಳುತಿವೆ
ಕಿಡಿಗಳೆನಿತೊ ಮರಳಿ,
ಮುರಿದುಬಿದ್ದ ಮನಮರದ ಕೊರಡೊಳೂ
ಹೂವು ಹೂವು ಅರಳಿ !
ಕೂಡಲಾರದೆದೆಯಾಳದಲ್ಲು ಕಂ-
ಡೀತು ಏಕಸೂತ್ರ ;
ಕಂಡುದುಂಟು ಬೆಸೆದೆದೆಗಳಲ್ಲು ಭಿ-
ನ್ನತೆಯ ವಿಕಟಹಾಸ್ಯ !

ಎತ್ತರೆತ್ತರಕೆ ಏರುವ ಮನಕೂ
ಕೇಸರ ಲೇಪ, ಲೇಪ ;
ಕೊಳೆಯ ಕೊಳಚೆಯಲಿ ಮುಳುಗಿ ಕಂಡನೋ
ಬಾನಿನೊಂದು ಪೆಂಪ ;
ತುಂಬುಗತ್ತಲಿನ ಬಸಿರನಾಳುತಿದೆ
ಒಂದು ಅಗ್ನಿ ಪಿಂಡ ;

ತಮದಗಾಧಹೊನಲಲ್ಲು ಹೊಳೆಯುತಿದೆ
ಸತ್ವವೊಂದಖಂಡ !

ಇದನರಿತೆನೆಂದೆ ; ಆ ಅರಿವುಕಿರಣವನೆ
ನುಂಗಿತೊಂದು ಮೇಘ ;
ಆ ಮುಗಿಲ ಬಸಿರನೇ ಬಗೆದು ಬಂತು ನವ
ಕಿರಣವೊಂದಮೋಘ !
ಹಿಡಿದ ಹೊನ್ನೆ ಮಣ್ಣಹುದು ; ಮಣ್ಣೊಳೂ
ಹೊಳೆದುಂಟು ಹೊನ್ನು ;
ಇದು ಹೀಗೆ ಎಂಬ ನಂಬುಗೆಯ ಊರೆಗೋ-
ಲಿಲ್ಲ ಇನ್ನು, ಮುನ್ನು !

ಆಶೆಯೆಂಬ ತಳವೊಡೆದ ದೋಣಿಯಲಿ
ದೂರತೀರಯಾನ ;
ಯಾರ ಲೀಲೆಗೋ ಯಾರೊ ಏನೊ ಗುರಿ-
ಯಿರದೆ ಬಿಟ್ಟ ಬಾಣ !
ಇದು ಬಾಳು ನೋಡು ; ಇದ ತಿಳಿದೆನೆಂದರೂ
ತಿಳಿದ ಧೀರನಿಲ್ಲ ;
ಹಲವುತನದ ಮೈಮರೆಸುವಾಟವಿದು ;
ನಿಜವು ತೋರದಲ್ಲ ;
ಬೆಂಗಾಡು ನೋಡು ಇದು ; ಕಾಂಬ ಬಯಲುದೊರೆ-
ಗಿಲ್ಲ ಆದಿ-ಅಂತ್ಯ ;
ಅದ ಕುಡಿದೆನೆಂದ ಹಲರುಂಟು ; ತಣಿದೆನೆಂ-
ದವರ ಕಾಣೆನಯ್ಯ !
ಆರೆಬೆಳಕಿನಲ್ಲಿ ಬಾಳಲ್ಲಿ ಸುತ್ತಿ ನಾ
ವೇಕೊ ಮಲೆತು, ಮೆರೆದು,
ಕೊನೆಗೆ ಕರಗುವೆವು ಮರಣತೀರಘನ
ತಿಮಿರದಲ್ಲಿ ಬೆರೆದು !

## ಬಿಡುಗಡೆಯ ಹಾಡು !

ಇಂದು ನನ್ನ ಬಿಡುಗಡೆ,
ಇಲ್ಲೆ ನನ್ನ ನಿಲುಗಡೆ ;
ಇನ್ನು ಇಲ್ಲ ಹರಿತ, ಕೊರೆತ,
ಇಲ್ಲವೋ ಪ್ರವಾಹವು :
ಇಲ್ಲವಯ್ಯ ಕಡಲ ಕುಡಿದು
ತೀರದಂಥ ದಾಹವು !
ಇಲ್ಲೆ ಹೊಸಲ ನಿಲುಗಡೆ ;
ಇಂದು ನನ್ನ ಬಿಡುಗಡೆ !

ಒಲವಿನಿಂದ, ಚೆಲುವಿನಿಂದ
ನಲವಿನ ನೆಳಲಿಂದಲೂನು
ಇಂದು ನನ್ನ ಬಿಡುಗಡೆ ;
ಇದೋ ನೋಡಿ ನನ್ನೆಡೆ !
ಬಿಡುವು, ಬಿಡುವು,
ತೆರವು, ತೆರವು,
ಸ್ವಚ್ಛಂದ, ಸ್ವಚ್ಛಂದ,
ಸ್ವೈರ, ಸ್ವೈರವು
ನನ್ನ ಜೀವವು !
ಇಲ್ಲಿ ಇಲ್ಲ ಪ್ರೇಮ, ಆಹಾ.
ಇಲ್ಲಿ ಇಲ್ಲ ವೈರವು,
ಮನವು ನಿರ್ವಿಕಾರವು !

ಆಶೆಗಿಲ್ಲ ಇನ್ನು ಜನನ,
ಚಿಂತೆಗಿಲ್ಲ ಇಂಧನ ;

ಒಡೆವ ಬಾಳ ಹಿಡಿದು ನಿಂತ
ಹೂವಿನಂಥ ಬಂಧನ
ಬಿಡುತಲಿಹುವು ಈ ದಿನ !
ಸರಸಹೃದಯಚಂದನ
ಇದೋ ಕಾದ ಕಬ್ಬಿಣ ;
ಮಸಣಯಾತ್ರೆಯಾದುದಯ್ಯ
ನನ್ನ ಬಾಳ ದಿಬ್ಬಣ !
ಮನದ ವಿವೃತ ಪಾತಾಳ
ದಾಳದಿಂದ ಕಾವಳ
ಏಳುತಿದೆ, ಹೂಳುತಿದೆ
ಭಾವ ಭಾವವ ;
ತಂಗುತಿದೆ, ನುಂಗುತಿದೆ
ಜೀವ ಜೀವವ !

ಇಂದು ನನಗೆ ಬಿಡುಗಡೆ :
ಶರಧಿಯಲೆವ ನಾವಿಕನಿಗೆ
ದೋಣಿಯಿಂದ ಬಿಡುಗಡೆ ;
ಸರದಿ ನಲಿವ ನೈದಿಲೆಗೆ
ನೀರಿನಿಂದ ಬಿಡುಗಡೆ ;
ಸೊಗದ ಕೋಡುಗಲ್ಲಿನಿಂದ
ಕೆಳಗೆ ಕಣಿವೆಯಾಳಕೆ,
ಕನಸು ಸಮೆದ ಕಾಮನಂಬಿ
ನಿಂದ ಪಾತಾಳಕೆ
ಇಂದು ನನ್ನ ಬಿಡುಗಡೆ ;
ಆಹಹಾ, ಇದೆಂಥ ಬಿಡುಗಡೆ !

ಇನ್ನುಮೇಲೆ ನನ್ನ ಹಾಡಿಗಿಲ್ಲವಯ್ಯ ತಾಳಲಯ ;
ನಾ ನಿರಾಮಯ ;

ಇನ್ನು ಒಲವಿನಂಕೆ ಶಂಕೆ ಇಲ್ಲ ತವಕ, ಅನುನಯು ;
ಹೃದಯ ನಿರ್ಭಯ !
ಗಾಳಿಯೊಡನೆ ಗುರಿಯಿಲ್ಲದೆ ತಿರುಗುವಣ್ಣ ತರಗೆಲೆ,
ತೂಗು ನಿನ್ನ ಹೊಂದಲೆ ;
ಇನ್ನು ನಾನು ನಿನ್ನೊಲೆ !
ನೆಲೆಯಿಲ್ಲದೆ ಬಾನಿನಲ್ಲಿ ತಿರಿವ ಮುಗಿಲ ತುರುಗಲೇ,
ಗುಡುಗುಹಾಡಿರೊಮ್ಮೆಲೆ,
ನಾನು ನಿಮ್ಮ ಬೆನ್ನೊಳೇ !
ಎಲೆಲೆ ಕಲ್ಲೆ ! ನಿನ್ನ ಕಲ್ಮೆ, ಬಲ್ಮೆ ನನ್ನದಾಗಲೀ ;
ಮನವು ಅಂತೆ ಮಾಗಲೀ !
ಗಿರಿಯೆ, ತರುವೆ, ಹೊನಲೆ, ಹುಲ್ಲೆ ! ನಿಮ್ಮ ಕೆಳೆಯ ಹೊಲದಲಿ
ನನ್ನ ಬಾಳು ಬಲಿಯಲಿ !
ನಿಮ್ಮೊಳಿಲ್ಲ ಒಲವಿನಂಬು, ದಯೆಯ ನಂಜುಜಂಭವು,
ರೂಪವಿಷದ ಕುಂಭವು !
ಮನದ ಹುಣ್ಣ ಕೆದಕದೆಯೆ, ನೆನಪಿನುರಿಯ ಕೆರಳಿಸದೆಯೆ
ನೀವು ತಂಪನೆರೆಯಿರಿ !
ಇಂದು ನನ್ನ ಕೂಡ ನನ್ನ ಕೆಳೆಯರಿರಾ ನಲಿಯಿರಿ,
ನನ್ನ ಹಾಡ ಹಾಡಿರಿ ;
ಇದೋ ನನ್ನ ಹಾಡಿದೇ :
'ಇಂದು ನನ್ನ ಬಿಡುಗಡೆ !'

ನನ್ನೆದೆಯನು ನಾನೆ ಹಿಳಿದು ಕುಡಿದು ಅದರ ರಸವನು
ಪ್ರೇಮವೆಂದು ಮೊರೆದೆನು ;
ನನ್ನ ಒಲವು ಕಾವಿನಿಂದ ಬೆಸೆದೆನೊಂದು ರೂಹನು,
ನಲ್ಲೆಯೆಂದು ಕರೆದೆನು !
ಒಲವೆಯೆಂದು ನಲವೆಯೆಂದು ನಾವು ಹುಸಿಯ ಮುಸುಕನು
ತೊಡಿಸಿ ನಿಜಕೆ ಮರೆವೆವು ;
ಒಲವು ಸುಳ್ಳು, ನಲವು ಜಳ್ಳು , ನಮ್ಮ ನಾವೆ ವಂಚಿಸುವೆವು ;

ಇಲ್ಲದುದನೆ ಹೊರೆವೆವು !
ನಾನೆ ನನ್ನ ನಲ್ಲೆ ನಲ್ಲ ನಲುಮೆ ಒಲುಮೆ ಸಂಭ್ರಮ,
ಉಳಿದುದೆಲ್ಲ ವಿಭ್ರಮ !

ಮರೆತು ಬಿಡೆಲೊ ಮಗುವೆ, ನಿನ್ನ ಒಲವಿನಂಗಭಂಗವ ;
ತೆರೆಯೊ ಅಂತರಂಗವ ! ೮೦
ಅಲ್ಲಿ ಹುಡುಕು ಕಳಚಿ ಬಿದ್ದ ನಿನ್ನ ಜೀವರತ್ನವ,
ತನ್ನತನದ ಸತ್ವವ !
ಸಿಕ್ಕಬಹುದು, ಸಿಕ್ಕದಿದ್ದರೇನು ? ಹುಡುಕುವಾಟವೇ,
ಅದರ ದಿವ್ಯಪಾಠವೇ
ಎದೆಗೆ ಬಲವ, ಮತಿಗೆ ಧೃತಿಯ, ಬಾಳಿಗೊಂದು ಶಾಂತಿಯ
ನೀಡಬಹುದು ಕಾಂತಿಯ !
ಅಂತೆಯೇನೊ ಬಂದಿತೇನೊ ಇಂದು ನಿನ್ನ ಬಿಡುಗಡೆ,
ಹಾಡು, ಹಾಡು, ದಣಿಯದೆ :
'ಇಂದು ನನ್ನ ಬಿಡುಗಡೆ !' ೮೯

# ಏನಿರಬಹದು ?

ಏನಿರಬಹುದಹೊ, ಏನಿರಬಹುದಹೊ,
ಏನಡಗಿರಬಹುದು ?
ಒಳಗೆ, ಒಳಗೆ, ಒಳಗೆ–ನನ್ನೀ-ಮನದ ಕಾಳದೊಳಗೆ ;
ಅಂತರಂಗದ ಅನಂತವಾರಿನಿಧಿಯಂತರಾಳದೊಳಗೆ !

ಮುತ್ತುರತುನಗಳೊ, ಹೊನ್ನಿನೆಸಳುಗಳೊ, ಬರಿಯ ಕೆಸರೊ, ಕೆಸರೊ ;
ಜನ್ಮಜನ್ಮದ ಜಘನ್ಯಧನ್ಯಭಾವಗಳ ಹುಚ್ಚುಹಸರೊ ;
ಬೆಳಕುಬಿತ್ತುಗಳು ಭವಕೆ ಒಳಲಿ ಬಂದಿಲ್ಲಿ ಪವಡಿಸಿಹುವೋ,
ಮಿಂಚುಬಳ್ಳಿಗಳ ಅರಳುಮೊಗ್ಗೆ ಸಾಲಾಗಿ ಹೊಂಚುತಿಹುವೋ,
ಚಂದ್ರ, ಸೂರ್ಯ, ಗ್ರಹ, ತಾರೆ ತೊಟ್ಟಿಲಲಿ ಇಲ್ಲಿ ಪಟ್ಟಿರುವುವೋ,
ಅಂಧಕಾರದ ಗಭೀರಶೂನ್ಯ ತಳವಿರದೆ ಮೊರೆಯುತಿಹುದೋ ;
ಫಲಿಸದಾಸೆಗಳ, ಬಳಸದಳಿಪುಗಳ ಮೂಲಬಿಂಬವೆಲ್ಲ
ನಂಬಿ ಕುಳಿತುವೋ ಇಲ್ಲಿ ಯುಗಯುಗದ ಒಲವು ಬೇನೆಯೆಲ್ಲ,
ಎಂದೋ ಬರುವುದೆಂದು ಗೆಲ್ಲ !

ಕಪ್ಪು ಕಪ್ಪು ಕಡಲಿದರ ತಡಿಯೆ ನಾ ನಿಂತು ನೋಡುತಿಹೆನು;
ಬೆಪ್ಪನಂತೆ ಅಲ್ಲಲ್ಲೆ ನಿಂತು ತಲ್ಲಣಿಸಿ ಕೋಡುತಿಹೆನು ;
ತೆರೆತೆರೆಯ ಘೋರವನು ಕಂಡೆ, ಕಂಡೆ ; ಕತ್ತಲೆಯ ತಿರುಳನುಂಡೆ ;
ಅಲ್ಲಿ ಮೊಳೆವ ಮಳೆಬಿಲ್ಲಮಾಟಕೇ ಮನವ ಮಾರಿಕೊಂಡೆ ;
ನನ್ನಯ ಬಗೆಯ ತೂರಿಕೊಂಡೆ.

ಅಂತೆ ಅಂತೆ ಅಲ್ಲಲ್ಲೆ ಆಗಲೇ ಕೆರಳುತಿತ್ತು ಕುತುಕ ;
ಎಂತೋ ಏನೊ ಆದರಾಳವೇನೊ ಆದ ತಿಳಿದುಕೊಂಬ ತನಕ
ಇಲ್ಲ ದಾಂತಿ, ನಸುವಿಲ್ಲ ಶಾಂತಿ ; ಹಸುರಿಲ್ಲ ಬಾಳಿನಲ್ಲಿ.

ಇಳಿವೆನೆಂದು ಎಂದೇ–ನನ್ನೀ–ಬಾಳ ಹಂಬಲೊಂದೆ !
ಇಳಿವ ಮೊದಲು ಅದರಾಳ–ಅಹಹ-ಅದರಾಳ ತಿಳಿವೆನೆಂದೆ ;
ಕಣ್ಣನಲ್ಲಿ ಅತ್ತಿತ್ತ ಮೇಲೆಕೆಳಗೆನಿತೊ ಸಲವೊ ಅಲೆದೆ,
ಇಣಕಿ ಇಣಕಿ ನೋಡಿದೆನು ನನ್ನೊಳೇ ಅಳೆದೆನಯ್ಯ, ಅಳೆದೆ !
ಆಳ, ಆಳ, ಆಳ !–ಇದು ತಳ
ಕಾಣದ ಪಾತಾಳ !

ಬೆದರಿ ಬೆದರಿ ಮುದುಮುದುರಿ ದಡವ ಬಿಟ್ಟೋಡಿ ಬಂದೆ ಹೊರಗೆ ;
ಆದರಾವುದೋ ಸೆಳೆತ ಎಳೆಯುತಿದೆ ನನ್ನ ತನ್ನ ತಡಿಗೆ !
ಜಗದ ಚೆಲುವು, ಮೊಗಮೊಗದ ಒಲವು, ಹಾ, ತಡೆಯದಲ್ಲ ನನ್ನ
ಓ, ಮುಳುಗಬೇಕು, ಮುಳುಮುಳುಗಬೇಕು, ಆ ತಳವು ಕಾಣುವನ್ನ,
–ಮುಳುಗಿದ ಒಡವೆ ದೊರೆಯುವನ್ನ !

# ಕಟ್ಟುವೆವು ನಾವು

ಕಟ್ಟುವೆವು ನಾವು ಹೊಸ ನಾಡೊಂದನು,—ರಸದ
ಬೀಡೊಂದನು.

ಹೊಸನೆತ್ತರುಕ್ಕುಕ್ಕಿ ಆರಿ ಹೋಗುವ ಮುನ್ನ,
ಹರೆಯದೀ ಮಾಂತ್ರಿಕನ ಮಾಟ ಮಸುಳುವ ಮುನ್ನ,
ಉತ್ಸಾಹಸಾಹಸದ ಉತ್ತುಂಗ ವೀಚಿಗಳ
ಈ ಕ್ಷುಬ್ಧಸಾಗರವು ಬತ್ತಿ ಹೋಗುವ ಮುನ್ನ-
ಕಟ್ಟುವೆವು ನಾವು ಹೊಸನಾಡೊಂದನು !

ನಮ್ಮೆದೆಯ ಕನಸುಗಳೆ ಕಾಮಧೇನು
ಆದಾವು, ಕರೆದಾವು ವಾಂಛಿತವನು ;
ಕರೆವ ಕೈಗಿಹುದಿದೋ ಕಣಸುಗಳ ಹರಕೆ ;
ಗುರಿ ತಪ್ಪದೊಮ್ಮುಖದ ಬಯಕೆ ಬೆಂಬಲಕೆ !

ಜಾತಿಮತಭೇದಗಳ ಕಂದಕವು ಸುತ್ತಲೂ,
ದುರ್ಭೇದ್ಯವೆನೆ ಕೋಟೆಕೊತ್ತಲಗಳು ;
ರೂಢಿರಾಕ್ಷಸನರಸುಗೈಯುವನು, ತೋಳ್ತಟ್ಟಿ
ತೊಡೆತಟ್ಟಿ ಕರೆಯುವನು ಸಂಗ್ರಾಮಕೆ !

ನಾವು ಹಿಂದೆಗೆವೆವೇ ? ವೀರ ತರುಣರು ನಾವು !
ಒಂದೆ ನೆಗೆತಕೆ ನೆಗೆವೆವೋ ಕಂದಕವನು,
ಕುಟ್ಟಿ ಪುಡಿಮಾಡುವೆವು ಕೋಟೆಗಳನು
ಎದೆಯ ಮೆಟ್ಟಿ ಮುರಿಯುವೆವಸುರರಟ್ಟೆಗಳನು ]

ಕೋಟೆಗೋಡೆಗೆ ನಮ್ಮ ಹೆಣಗಳೇ ಮೆಟ್ಟಿಲು
ನಮ್ಮ ಸಾವೇ ನೋವೆ ಹೊಸ ನಾಡ ತೊಟ್ಟಿಲು
ಆದಾವು ; ಅಂಜುವೆದೆ ನಮ್ಮದಲ್ಲ ;
ಸೋಲುಬಗೆ ವೀರನಿಗೆ ಸಲ್ಲ, ಹೊಲ್ಲ !

ಎಡರುಗಳ ಕಡಲುಗಳನೀಸಿ ಬರುವೆವು, ಘೋರ
ನೈರಾಶ್ಯದಗ್ನಿಮುಖದಲ್ಲು ಕೂಡ
ಹೊಕ್ಕು ಹೊರಡುವೆವೆಲ್ಲ ತೊಡಕುಗಳ ಒಡಕುಗಳ
ಬಿಡಿಸಿ, ಇಡಿಗೊಳಿಸಿ ಕಟ್ಟುವೆವು ನಾಡ !

ಇಂದು ಬಾಳಿದು ಕೂಳ ಕಾಳಗವು ; ಹೊಟ್ಟೆಯೇ
ಕೇಂದ್ರವಾಗಿದೆ ನರನ ಜೀವಿತಕ್ಕೆ ;
ಅನ್ನದನ್ಯಾಯದಾವಾಗ್ನಿಯಲಿ ಕರಗುತಿದೆ
ನರತೆ, ಸಂಸ್ಕೃತಿ, ಪ್ರೀತಿ, ದಿವದ ಬಯಕೆ !

ಇರುವೆಲ್ಲವನು ಎಲ್ಲ ಜನಕೆ ತೆರವಾಗಿಸುವ
ಸಮಬಗೆಯ ಸಮಸುಖದ ಸಮದುಃಖದ
ಸಾಮರಸ್ಯದ ಸಾಮಗಾನಲಹರಿಯ ಮೇಲೆ
ತೇಲಿ ಬರಲಿದೆ ನೋಡು, ನಮ್ಮ ನಾಡು !

ಇಲ್ಲೆ ಈ ಎಡೆಯಲ್ಲೆ, ನಮ್ಮ ಮುಂಗಡೆಯಲ್ಲೆ,
ಅಳಲುಗಳ ಹೆಡೆಯಲ್ಲೆ
ಸೋಲುಗಳ ತೊಡೆಯಲ್ಲೆ
ಅರಳೀತು ನಮ್ಮ ನಾಡು ;

ನಮ್ಮೆದೆಯು ತುಂಬಿರುವ ಆದರ ನರುಗಂಪು ಹೊರ
ಹೊಮ್ಮುವುದ ಕಾದು ನೋಡು !

ಉತ್ಸಾಹ ಉದ್ವೇಗ ಉದ್ರೇಕಗಳ ವೀರ
ಯುವಜನದ ನಾಡ ಗುಡಿಯು ;
ಅದರ ಹಾರಾಟಕ್ಕೆ ಬಾನೆ ಗಡಿಯು,
ಬರಲು ಬಿಡವೆಂದಿಗೂ ಆದಕೆ ತಡೆಯು !
ತಡೆವವರು ಬನ್ನಿರೋ, ಹೊಡೆವವರು ಬನ್ನಿರೋ,
ಕಿಡೆನುಡಿವ ಕಿಡೆಬಗೆವ ಕಿಡುಕು ಜನರೇ ಬನ್ನಿ !
ಕೊಟ್ಟೆವಿದೊ ವೀಳೆಯವನು ;
ನಿಮ್ಮೆಲ್ಲರನು ತೊಡೆದು ನಿಮ್ಮ ಮಸಣದ ಮೇಲೆ
ಕಟ್ಟುವೆವು ನಾವು ಹೊಸ ನಾಡೊಂದನು,–ಸುಖದ
ಬೀಡೊಂದನು !

# ನಾವೆಲ್ಲರು ಒಂದೆ ಜಾತಿ

ನಾವೆಲ್ಲರು ಒಂದೆ ಜಾತಿ, ಒಂದೆ ಮತ, ಒಂದೆ ಕುಲ ;
ನಾವು ಮನುಜರು ;
ನರರ ನಡುವಿನಡ್ಡ ಗೋಡೆಗಳನು ಕುಟ್ಟಿ ಕೆಡಹುವೆವು,
ನಾವು ವಿಲಯರುದ್ರರು!
ಹೊಸ ಬಾಳಿನ ಹೊಸ ಸಮತೆಯ ಸಮರಸವನು ಸಮೆವೆವು,
ನಾವು ನವವಿಧಾತರು !

ಕ್ರಾಪುತಲೆಯು ಈ ನವೀನ ಯುಗದ ಜಗದ ಕೇತನ ;
ಅದರ ಕೆಳಗೆ ತಿಂತಿಣಿಸಿದೆ ಯೋದ್ಧೃಗಣ ವಿನೂತನ ;
ಎಲ್ಲೆಕಟ್ಟನೆಲ್ಲ ಮೆಟ್ಟಿ ಮುಂದೋಡುವ ಯುವಜನ.
‘ಎಲ್ಲ ಒಂದೆ’ ಎಂಬುದೊಂದೆ ನಮ್ಮ ಯುದ್ಧಘೋಷಣ !
ಹಳೆಯ ಕೊಳೆಯ ಕಳೆವೆವು,
ನವವ ಶುಭವ ಬೆಳೆವೆವು.
ದಿವವನಿಲ್ಲಿ ಈ ನೆಲಕೇ ಎಳೆದು ಸೆಳೆದು ತರುವೆವು,
ನಾವು ಸದಾ ತರುಣರು !

ತೆರೆಬಾಗಿಲ ಹೊರನೋಟದ ಹೊರೆಹಸುರಿನ ಹಂದರ,
ನಮ್ಮ ಹೃದಯ ಮಂದಿರ !
ಅಲ್ಲಿ ಎಲ್ಲ ಜನಕು ಇದೆ ಸ್ವಾಗತವು ನಿರಂತರ ;
ಚಿರಾ ಉದಾರ ಸುಂದರ !
ಬನ್ನಿರಣ್ಣ ಬನ್ನಿರೆಲ್ಲ ಬಣ್ಣದಣ್ಣತಮ್ಮರು,
ನಡೆಯ ನುಡಿಯ ನೂರುಗೋಡೆಗೋಡೆ ನಿಮಿರಿ ನಿಂತರೂ
ನಾವೆಲ್ಲರು ಒಂದೆ ತಾಯ ಎದೆಯಾಸೆಯ ಕುಡಿಗಳು ;
ಒಂದೆ ಮಹಾ ಪ್ರೇಮಾಗ್ನಿಯ ಹೋಮಾಗ್ನಿಯ ಕಿಡಿಗಳು ;

ಭೂಮವಾವುದನ್ನೊ ಇಲ್ಲಿ ಬೆಳೆಯೆ ಬಂದ ಭೀಮರು,
ಪ್ರೇಮಸಿದ್ಧಿಗಾಗಿ ನೋನುತಿರುವ ಸತ್ಯಕಾಮರು !
ಕೈಕೈಗಳ ಕುಲುಕಿಸಿ,
ಎದೆಗೆದೆಯನು ಹಾಯಿಸಿ,
ಭೇದವೆಲ್ಲ ಸುಟ್ಟುರಿವೊಲು ಎದೆಯೊಲವನು ಕೆರಳಿಸಿ,
ತೊಳತೊಳಗುವ ನರತೆಯೆಂಬ ಬಂಗಾರವನರಳಿಸಿ
ಯುವಜನವಿದೊ ನವಜನವಿದೊ ದುಡುಕುತಿಹುದು ಮುಂದಕೆ,
ಪದಪದಕೂ ಯುಗಯುಗಗಳೆ ಸರಿಯುತಿರಲು ಹಿಂದಕೆ,
ಒನ್ಮ್ಮತದೊಗ್ಗಟ್ಟಿನ ಒಬ್ಬಗೆಬಾಳಿನ ಚಂದಕೆ !

ಜಾತಿಮತದ ಗುಹೆಗಳಿಂದ ಹೊರಬನ್ನಿರಿ ಬಯಲಿಗೆ,
ಕೃತಕ ತಿಮಿರದಾಳದಿಂದ ವಿಸ್ತಾರದ ಬೆಳಕಿಗೆ ;
ಸೇರಿಕೊಳ್ಳಿ, ಕೂಡಿಕೊಳ್ಳಿ, ಮುನ್ನುಗ್ಗುವ ಸಾಲಿಗೆ,
ಕತ್ತಲೊಡನೆ ಹೊಡಿದ ಈ ಉತ್ಸಾಹದ ದಾಳಿಗೆ ;
ಕೂಡಿಸಿರೆದೆ ಕೊರಲುಗಳನು ಹೊಸ ಬಾಳಿನ ಹಾಡಿಗೆ :
ನಾವೆಲ್ಲರು ಒಂದೆ ಜಾತಿ, ಒಂದೆ ಮತ, ಒಂದೆ ಕುಲ ;
ನಾವು ಮನುಜರು !
ಹೊಸ ಬಾಳಿನ ಹೊಸ ಸಮತೆಯ ಸಮರಸವನು ಸಮೆವೆವು,
ನಾವು ನವವಿಧಾತರು !

# ಮೋಹನ ಮುರಲಿ

ಯಾವ ಮೋಹನಮುರಲಿ ಕರೆಯಿತು ದೂರ ತೀರಕೆ ನಿನ್ನನು ?
ಯಾವ ಬೃಂದಾವನವು ಸೆಳೆಯಿತು ನಿನ್ನ ಮಣ್ಣಿನ ಕಣ್ಣನು ?

ಹೂವುಹಾಸಿಗೆ, ಚಂದ್ರ, ಚಂದನ, ಬಾಹುಬಂಧನ ಚುಂಬನ ;
ಬಯಕೆತೋಟದ ಬೇಲಿಯೊಳಗೆ ಕರಣಗಣದೀ ರಿಂಗಣ ;

ಒಲಿದ ಮಿದುವೆದೆ, ರಕ್ತಮಾಂಸದ ಬಿಸಿದು ಸೋಂಕಿನ ಪಂಜರ ;
ಇಷ್ಟೆ ಸಾಕೆಂದಿದ್ದೆಯಲ್ಲೋ ! ಇಂದು ಏನಿದು ಬೇಸರ ?

ಏನಿದೇನಿದು ಹೊರಳುಗಣ್ಣಿನ ತೇಲುನೋಟದ ಸೂಚನೆ ?
ಯಾವ ಸುಮಧುರ ಯಾತನೆ ? ಯಾವ ದಿವ್ಯದ ಯಾಚನೆ ?

ಮರದೊಳಡಗಿದ ಬೆಂಕಿಯಂತೆ ಎಲ್ಲೊ ಮಲಗಿದೆ ಬೇಸರ ;
ಏನೊ ತೀಡಲು ಏನೊ ತಾಗಲು ಹೊತ್ತಿ ಉರಿವುದು ಕಾತರ ;

ಸಪ್ತಸಾಗರದಾಚೆಯೆಲ್ಲೋ ಸುಪ್ತ ಸಾಗರ ಕಾದಿದೆ,
ಮೊಳೆಯುದಲೆಗಳ ಮಹಾ ಮರ್ಮರ ಇಂದು ಇಲ್ಲಿಗು ಹಾಯಿತೆ ?

ವಿವಶವಾಯಿತು ಪ್ರಾಣ ; ಹಾ ! ಪರವಶವು ನಿನ್ನೀ ಚೇತನ ;
ಇರುವುದೆಲ್ಲ ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ ?

ಯಾವ ಮೋಹನಮುರಲಿ ಕರೆಯಿತು ಇದ್ದಕಿದ್ದೊಲೆ ನಿನ್ನನು ?
ಯಾವ ಬೃಂದಾವನವು ಚಾಚಿತು ತನ್ನ ಮಿಂಚಿನ ಕೈಯನು ?

# ಸುಲಿಗೆಯೆಂಬ ಯಾಗ

ಸ್ವಾರ್ಥದ ವೇದಿಕೆಯಲಿ ನಿರ್ದಯತೆಯ
ಯಜ್ಞಕುಂಡ ಹೂಡಿ,
ವಿಷಯವಿಲಾಸದ ಬೆಂಕಿಯೊಟ್ಟಿದರು
ಭೋಗದಾಜ್ಯ ನೀಡಿ,
ಸುಲಿಗೆಯಾಗವನು ಪೂಜಿಸಿದರೀ ಭೂ-
ಯಜ್ಞಶಾಲೆಯಲ್ಲಿ
ಗುರುಗಳು, ರಾಜರು, ವಣಿಜರು ; ದುರ್ಬಲ
ದೀನ ಮಾನವಾಳಿ
ಧರ್ಮಶಾಸ್ತ್ರಗಳ ಮದ್ಯ ಕುಡಿದು ಮೈ
ಮರೆಯಿತು ಪಶುವಾಗಿ ;
ಯೂಪಸ್ತಂಭವೆ ದೇವರ ಬಿಂಬವೆ
ಎಂದು ಭ್ರಮಿಸಿ ಬಾಗಿ,
ಕೊರಲ ನಿರಿದರೂ ಕೆರಳಲಿಲ್ಲ ; ನೆ
ತ್ತರನೆ ಹೀರಿ ಹೀರಿ
ಊದಿಕೊಂಡರೂ ಒದೆಯಲಿಲ್ಲವೋ
ಧರ್ಮವಾಕ್ಯ ಮೀರಿ !

ವಿಧಿನಿಷೇಧಗಳ ಕಟ್ಟು ಕಟ್ಟಳೆಯ
ದೊಡ್ಡಿಯನ್ನು ತೆರೆದು
ಜಾತಿನೀತಿಗಳ ಮುಳ್ಳು ಬೇಲಿಯನು
ಸುತ್ತುಮುತ್ತು ಬಿಗಿದು,
ದೀನದಲಿತ ನರಪಶುಸಂಘಾತವ
ಒಳಗೆ ಕೂಡಿಸಿಟ್ಟು,

ಅರಸುತನದ ಹಿರಿಗಾವಲಿಟ್ಟು, ಕುಣಿ
ಕುಣಿದರು ಮೈಬಿಟ್ಟು !
ಕವಿ ಗಮಕಿ ವಾದಿ ವಾಗ್ಮಿಗಳು ಗಾಯಕರು
ಯಾಗಭೂಮಿಯಲ್ಲಿ
ನೆರೆದರು-ಶಾಸ್ತ್ರಕೋವಿದರು, ಪಂಡಿತರು
ಸುಲಿಗೆಯಾಗದಲ್ಲಿ
ಮರೆದರು ಪಾಂಡಿತ್ಯವನು ಪ್ರತಿಭೆಯನು ;
ದೇವ ಧರ್ಮ ಕಲೆಯ
ಇಂದ್ರಜಾಲವನು ಹರಹಿ ಕರೆದರೋ
ದೇವದೇವತೆಗಳ ;
ಸುರರು ತಣಿದು ಕಳುಹಿದರು ನಂದನವ
ನೀ ನರಾಧಿಕರಿಗೆ ;
ನರಕವೊಂದನಣಿಗೊಳಿಸಿ ಕೊಟ್ಟರಾ
ನರವರಾಕಗಳಿಗೆ !

ಕಡಲಿನ ಮುಗಿಲಿನ ಅಂದವ, ಚಂದವ,
ಮಳೆಬಿಲ್ಲಿನ ಚೆಲುವ,
ದೇವಮಾನವರ ಪ್ರಣಯೋಲ್ಲಾಸವ,
ಕೋಗಿಲೆಯಿಂಚರವ,
ಮಧುಮಾಸದ ಮೃದುಹಾಸ್ಯವ, ಲಾಸ್ಯವ,
ಋತುಗಳ ರಿಂಗಣವ,
ಭಾವಭಾವಗಳ ತುಮುಲವ, ಕಾವ್ಯಕ
ಲಾವಳಿಗಳ ನಲವ,
ತತ್ವಜ್ಞಾನದ ಶಾಂತಿಯ, ಕಾಂತಿಯ,
ಸಂಸ್ಕೃತಿಗಿರಿಶಿರವ,
ಪ್ರತಿಭೆಯ ಮಿಂಚನು, ಬುದ್ಧಿಯ ಹೊಂಚನು
ವಿಜ್ಞಾನದ ಓಲವ,
ಕಂಡು ಉಂಡವರು ಹತ್ತುಮಂದಿ ; ಉಳಿ
ದವರು ಲಕ್ಷಲಕ್ಷ

ನರಕುರಿಗಳು, ಅರಸಿಕರು, ಕುತ್ಸಿತರು !
ಅವರ ಬಾಳ ಅಕ್ಷ
ಸುತ್ತುತಲಿದೆ ಕೊಳಕಸಗಳಲ್ಲಿ ಮನೆ
ಯೆಂಬ ಬಿಲಗಳಲ್ಲಿ ;
ಅಜ್ಞಾನದ ಕಾರ್ಗತ್ತಲಲ್ಲಿ ಬಾ
ಳೆಂಬ ಸಾವಿನಲ್ಲಿ ;
ನೈರಾಶ್ಯದ ಕಾಳ್ಗಿಚ್ಚಿನಲ್ಲಿ ತಣಿ
ವಿರದ ದಣಿವಿನಲ್ಲಿ !
ಸುಖಗಿರಿಶೃಂಗಸ್ಥಿತಿಗೆ ನಲಿವವರ
ಕಣ್ಣು ಬಾನಿನತ್ತ,
ಕೆಳಗೆ ಅದರ ಹೊರೆ ಹೊತ್ತು ನಿಂತವರು
ಕೋಟಿ ಕೋಟಿ ಮಾತ್ರ !
ಮೂಕ ವೇದನೆಯ ಶೋಕ ತುಂಬಿ ತುಳು
ಕಿದರು ಜಗವನೆಲ್ಲ,
ಸುಲಿಗೆಗಾರರದ ಕೇಳಲಿಲ್ಲ ; ಎದೆ
ಕರಗಲಿಲ್ಲ, ಇಲ್ಲ ;
ಇಟ್ಟಿರುವ ದೊಡ್ಡಿ ಕಟ್ಟಿರುವ ಬೇಲಿಗಳು
ನಸುವು ಅಲುಗಲಿಲ್ಲ !
ಧರ್ಮದ ತೆರೆಮರೆಯಲ್ಲಿ ನಡೆದ ನರ–
ಹಿಂಸೆ ಇನ್ನು ಸಾಕು ;
ಮನುಜಹೃದಯ ಅನ್ಯಾಯರಾಕ್ಷಸನ
ಗೆದ್ದು ಬದುಕ ಬೇಕು !
ಅನ್ನವೆಲ್ಲ, ಚೆಲುವೆಲ್ಲ, ಎಲ್ಲ ಸುಖ,
ಎಲ್ಲ ಎಲ್ಲ ಬೆಳಕು

ಎಲ್ಲ ಜನಕು ತೆರವಾಗಬೇಕು ; ಮಿಗಿ
ಲುಂಟೆ ಗುರಿಯು ಇದಕು ?
ಒಂದೆ ಕೊರಲಿನಲಿ ಕೂಗಿರಣ್ಣ ; 'ಓ
ಸುಲಿಗೆಯಾಗ ಸಾಕು !
ಇದೊ ಅಣ್ಣತಮ್ಮ ; ಇಕೊ ಅಕ್ಕತಂಗಿ ; ಸಮ
ಭಾವ ಬೆಳೆಯಬೇಕು !
ಈ ನರಕ ಸಾಕು ; ಆ ನಾಕ ಬೇಕು ; ಅದ
ಕಾಗಿ ದುಡಿಯಬೇಕು.
ಇಂದಲ್ಲ ನಾಳೆ ಅದು ಬಂದೆ ಬರುವುದದ
ಕಾಗಿ ಮಡಿಯಬೇಕು !'

# ಎಲೆ ಕವಿ !

ಎಲೆ ಕವಿ ! ನಿನ್ನನು ನೀ ಮರೆ ;
ಶರಧಿಯೊಂದೆ ಗುರಿಯಾದ ಬೆಟ್ಟದೊರೆ
ಕೆಳಗೆ ಕೆಳಗೆ ಹರಿವಂತೆ ಆಳಕೆ,
ಗಾರುವಡೆದ ನೆಲದೊಡಲ ಶಮನಕೆ,

ಹರಿ ನೀ ಸಮತಳಕೆ,
ಕಡಲಿನ ಸಮತಳಕೆ !

ಜಗದ ಜನವು ತನ್ನಳಲಿನ ಹೊರೆ ಹೊರೆ
ತಾಳಲಾರದೆಯೆ ಕುಸಿದು ಬೀಳುತಿರೆ
ನೀನು ನಿನ್ನ ಎದೆಬಾವಿಗೆ ನೋವಿಗೆ
ಕೊರಗಿ ಸೊರಗಿ ನಿನ್ನೂಹೆಯ ದೀವಿಗೆ
ಹಿಡಿದು ನಡೆವೆನೆಂದೆನುವೆಯ, ಸಗ್ಗಕೆ ?
ಕನಸು ಸಮೆದ ಮಳೆಬಿಲ್ಲಿನ ಅಗ್ಗಕೆ ?

ಹರಿ ನೀ ಹೊರಜಗಕೆ ;
ಬಯಲಿನ ಸಮತಳಕೆ.

ಹೊಸ ಹೊಸ ಆಸೆಯ ಹೂಗಳು ಸೆಳೆವುವು ದಾರಿಯ ಕೆಲಬಲಕೆ,
ಹೊಸ ಸಂತಸಗಳ ಹುಲ್ಲಿನ ಹಾಸಿಗೆ ಕರೆವುದು ವಿಲಸನಕೆ,
ಭಾವೋದ್ರೇಕವು ಹಕ್ಕಿಗೊರಲಿನಲಿ ಕರೆವುದು ಪರವಶಕೆ ;
ಆದರು ನೀನಿದ ಮರೆಯದಿರೆಲೆ ಮಗುವೆ :

ನಗುವೆಂದರೆ ಅದು ಅಳುವಿನ ಸೆಲೆಯು,
ಸೊಗವು ದುಗುಡಕಿಕ್ಕಿದ ಚೆಲು ಬಲೆಯು ;

ಒಲವು ಎದೆಯ ಸುಡಲಿಕ್ಕಿದ ಗಂಧದ ಚಿತೆಯು ;
ಸ್ಥಿರವಾಗಲಿ, ಹಾ, ಮತಿಯು !
ಎಲ್ಲ ಜನದ ಎದೆತಣಿಸುವ ಪಣವೇ ಜೀವನ ನಿಜಗತಿಯು !
ಎಲೆ ಕವಿ ! ನಿನ್ನಳಿಯಾಸೆಯ ತೊರೆ, ತೊರೆ !
ಶಮನವೊಂದೆ ಗುರಿಯಾದ ಬೆಟ್ಟದೊರೆ

ಕೆಳಗೆ ಕೆಳಗೆ ಹರಿವೊಲು ಮೈದಾನಕೆ
ಗಾರುಗೊಂಡ ನೆಲದೊಡಲಿನ ಶಮನಕೆ,

ಹರಿ ನೀ ಸಮತಳಕೆ,
ಕಡಲಿನ ಸಮತಳಕೆ ! ೨೯

# ಯುಗಾದಿ

ಯುಗಯುಗಾದಿಯ ತೆರೆಗಳೇಳುತಿವೆ, ಬೀಳುತಿವೆ
ಹೊಸಹೊಸವು ಪ್ರತಿವರುಷವು ;
ಒಳಗೆ ಅದೊ ಕಾಣುತಿದೆ ಚೆಲುವಿರದ ನಲವಿರದ
ಕೊಳೆಯ ಬೆಳೆ :—ರಂಗಮಂದಿರವು !

ನರಮೃಗಾಲಯದ ಗೊಂದಲವಲ್ಲಿ ಕೇಳುತಿದೆ,
ರುದ್ರ ಬೀಭತ್ಸ ಘನ ಘೋರನಾಟಕವು
ನಡೆಯುತಿದೆ ಮರಮರಳಿ ; ಅದೆ ಅದೇ ಹಳೆಯ ಕತೆ ;
ಬದುಕಲರಿಯದ ಹುಚ್ಚು ಹುಡುಗಾಟವು !

ಇದು ವಿಷವ್ಯೂಹ ; ಇಲ್ಲಾವ ಕಪಟ ಅದೇಕೆ
ತಂದು ಕೂಡಿದನೊ ನರಕುಲವ ;
ತೆವಳುವವು, ತೊಳಲುವೆವು, ನಡೆಯುವೆವು, ತಡೆಯುವೆವು ;
ಬಯಲ ಸೇರುವ ಬಯಕೆ ಮಾತ್ರ, ವಿಫಲ !

ಬಾಳುದ್ದವೂ ಅಲೆದು ನೂರು ಯೋಜನ ತೊಳಲಿ
ಕುಸಿಯೆ ಕಾಲ್ಗಳು ಅಳಿಯ ಬಲವು,
ತನ್ನ ನೆಲೆಯನು ಹುಡುಕಿ ಹೊರಟ ಬಡಜೀವಕಿದೆ
ತೃಪ್ತಿ ; ಹೊರಟಲ್ಲಿಗೇ ಬಂದ ಗೆಲವು !

ಈ ಯುಗಾದಿಯು ಕೂಡ ಈ ಮಾತ ಸಾರುತಿದೆ ;
ನರನ ಬಾಳಿನ ಗೋಳಿಗಿಲ್ಲ ಅಂತ ;
ನರನೆದೆಯ ಕಲ್ಪನೆಯ ಕುಸುಮಸಂಕುಲವೆಲ್ಲ
ಬಂಜೆಹೂವುಗಳಯ್ಯೊ ;—ಇದೆ ದುರಂತ!

ಜನಮನದೊಳಂಧಕಾಸುರ ರಾಜ್ಯಭಾರ ; ನರ
ನೆದೆಯೊಳು ಹಿರಣ್ಯಾಕ್ಷನರಸುತನವು
ನಡೆಯುತಿದೆ ಇಂದಿಗೂ ; ಅವತಾರ ಬರಿಲೀಲೆ !
ಕೊಂದರೂ ಸಾಯದೀ ಅಸುರಕುಲವು !

ಭಾವನೆಯು ಗಾಳಿಗೋಪುರ ವಿಹಾರವು, ಬುದ್ಧಿ
ನೀರಡಿಸಿದವಗುಪ್ಪನೀರ ತಣಿವು ;
ದಿವ್ಯಜೀವನದಾಶೆ ಅದು ನಿರಾಶೆಗೆ ನಾವು
ಕೊಟ್ಟು ಬದುಕಿದ ಬೇರೆಯೊಂದು ಹೆಸರು.

ಈ ಯುಗಾದಿಯ ಮಾತು ಕೇಳುತಿದೆ ಮರಮರಳಿ
ಮೊದಲಾಗುತಿದೆ ಯುಗವು, ನರನ ಜಗವು ;
ವರುಷವರುಷವು ನಮ್ಮ ಪಯಣ ಮೊದಲಾಗುತಿದೆ ;
ಇದಕು ಮಿಗಿಲಿಲ್ಲ, ಹಾ ! ನರಗೆ ಸೊಗವು ! ೩೨

# ಇದು ಮೊದಲು

ಹಸಿದಿಹುದು ಹೊಟ್ಟೆ ; ಕೊಡು ಅನ್ನವನು. ನನ್ನ ತನು
ಕೋಡುತಿದೆ ಚಳಿಗೆ ; ಕೊಡು ಬಟ್ಟೆಗಳನು,
ಗಾಳಿ ಬೆಳಕಿನ ಗೋರಿಯಲ್ಲಿ ಹೂತಿರುವೆನಿದೊ ;
ಕೊಡು ನನಗೆ ಸುವಿಶಾಲ ವಸತಿಗಳನು;
ಇದು ಮೊದಲು, ಆಮೇಲೆ ಉಳಿದುದೆಲ್ಲ ;
ಅದುವರೆಗೆ ಉಳಿದೆಲ್ಲ ಮಾತು ಹೊಲ್ಲ !

ನನ್ನ ಬೆವರನು ಹೀರಿ ಹೀರಿ ಬೆಳೆದಿದೆ ಜಗದ
ಸಿರಿಯ ಸಸಿ ; ಅದರ ಫಲವೆಲ್ಲ ನಿನಗೆ !
ನಗುವ ತೋಟದ ಹೊರಗೆ ಕೊಳೆ ಚರಂಡಿಯ ಮರೆಗೆ
ನಾರುವೆನು ನಾನು–ಕ್ರಿಮಿ ! ನಿನ್ನ ಜಗಕೆ.
ದಯೆಯ ಮಂಜನು ಸುರಿದು ನನ್ನ ಮನಕೆ,
ನೀನೆ ತಲೆದೂಗುತಿಹೆ ನಿನ್ನ ಗುಣಕೆ !

ಧರ್ಮಶಾಸ್ತ್ರದ, ಕಲೆಯ, ನೀತಿಧರ್ಮದ ಬಲೆಯ
ಹೆಣೆದು ಕರೆಯುವೆ ನನ್ನ ನಿನ್ನ ಬಳಿಗೆ ;
ನಿನ್ನ ಮಾತಿಗೆ ಮರುಳು ನೊಣ ನಾನು ಈ ವರೆಗೆ ;
ಬರುವ ಕಾಲವೆ ಬೇರೆ ನೋಡು ಹೊರಗೆ :
ಜೇಡನನ್ನೂ ನೋಣೆವ ಅತಿ ಪ್ರಚಂಡ,
ಕಾಣದೇ ಅಲ್ಲಿ ಆ ತಂಡ, ತಂಡ ?

ಒಡೆಯುತಿರೆ ಹಣತೆ ಹೊಸ ಬತ್ತಿ, ಹೊಸೆಯುವೆ ; ಬತ್ತಿ
ಹೋಗುತಿರೆ ಸೆಲೆ ಕಣ್ಣ ನೀರ ಕರೆವೆ !
ಉರಿವೊಲೆಯ ಮೇಲೆ ಹೂಮಾಲೆ ತೂಗುವೆ; ಕಾಲು
ಕುಸಿವವಗೆ ಶಿಖರವನು ಹಾಡುತಿರುವೆ !

ನನ್ನ ಮನದೊಳದೇನ ಕಾಂಬೆ ನೀನು ?
ಹಸಿದ ಹುಲಿ ! ಹೂಂಕಾರ ಕೇಳದೇನು ?

ಹೊಟ್ಟೆಯಲಿ ಹುಟ್ಟಿದೀ ಬೆಂಕಿ ಏಲಯಾಗ್ನಿ ಸಮ
ಏರುತಿದೆ ಎದೆಗೆ, ಮನುಜತೆಯು ಚಿತೆಗೆ !
ಕಟ್ಟು, ಕಟ್ಟಳೆಯೆಲ್ಲ ಇದಕೆ ಕಟ್ಟಿಗೆಯಾಗಿ
ಸುಟ್ಟೀತು ಮನಕುಲವೆ ಇದರ ಹತಿಗೆ.
ನಿನ್ನ ನಂದನ ಬೂದಿಯಾಗದಂತೆ
ನನ್ನದನು ಕೊಡು ನಾನು ತಣಿಯುವಂತೆ.

ನ್ಯಾಯ ಅನ್ಯಾಯಗಳ ಸತ್ಯಾಸತ್ಯಗಳ ಅರಿವು
ಸುಟ್ಟುಹೋಗಿದೆ, ನೋಡು, ಹಸಿವೆಯಲ್ಲಿ !
ನಾನು ಪಶು, ಶುದ್ಧಪಶು ! ಹೊಟ್ಟೆ ತುಂಬಲಿ ; ಬಳಿಕ
ಬಂದೇನು ನಾನೂನು ನಿನ್ನ ಕೂಡ
ನಿನ್ನ ಕನಸಿನ ನೂಲುದಾರಿಯಲ್ಲಿ ;
ಏರೇನು ನಾ ಮುಗಿಲಿನೇಣಿಯಲ್ಲಿ !

ಸುತ್ತುಮುತ್ತಲು ನನ್ನ ಬಳಸಿಹುವು ದೀನತೆಯ
ಹೀನತೆಯ ಗೋಡೆಗಳು ಬಾನೆತ್ತರ ;
ಅದರಾಚೆ ಚೆಲುವೊಲವು ರಸವು ಸಂಸ್ಕೃತಿ ನಲವು
ನಲಿವುವೆಂದರೆ, ನೋಡು, ಇದೆ ಉತ್ತರ :—
ಒಡೆದು ಬೀಳಲಿ ಮೊದಲು ಕೋಟೆಯೆಲ್ಲ ;
ಇದು ಮೊದಲು ಆ ಮೇಲೆ ಉಳಿದುದೆಲ್ಲ !

ಅನ್ನವನು ಕೊಡು ಮೊದಲು ; ಬಟ್ಟೆಯನು ಕೊಡು ಉಡಲು ;
ಕಟ್ಟಿಕೊಡು ಮನೆಗಳನು ; ಬಳಿಕ ನೀನು

ಕವಿಯಾಗಿ ಬಾ, ನೀತಿವಿದನಾಗಿ ಬಾ, ಶಾಸ್ತ್ರಿ
ಯಾಗಿ ಧಾರ್ಮಿಕನಾಗಿ ಮನುಜತೆಯನು
ಕಲಿಸು ಬಾ ; ಇವನದನು ಕಲಿಯೆ ಬಲ್ಲ !
ಇದು ಮೊದಲು ಆ ಮೇಲೆ ಉಳಿದುದೆಲ್ಲ ! ೪೮

# ಧೂಮಲೀಲೆ

ಸಿಗರೇಟಿನ ಹೊಗೆ
ವರ್ತುಳ, ವರ್ತುಳ
ಧೂಪಧೂಮ ಮಾಲೆ,
ವಿವಿಧರೂಪ, ವಿಹ್ವಲವಿಲಾಪಗಳು
ವಿಕೃತ ಚಿತ್ರಗಳು
ಗಾಳಿಯಲೆಯ ಮೇಲೆ,

ಗಾಳಿಗು ನಸು ಹಗುರ ಹೊಗೆ ;
ಅಂತೆ ಅನಾಯಾಸ ಏರುತಿದೆ ಹೊಗೆಯು ಹೀಗೆ, ಹೀಗೆ :
ಸುರುಳಿ ಸುರುಳಿ ಹೊರಹೊರಳಿಯುರುಳಿ ಎಳೆಎಳೆಗಳಾಗಿ
ಬಿಡಿಬಿಡಿಸಿ ಬೆಳ್ಳಿಗೆರೆ
ಎರೆದು ಕೊರೆದ ಹಾಗೆ
ಕೊರೆದು ಬಿಟ್ಟ ಹಾಗೆ !

ಕರುಣೆಗಾಳಿ ನಸು ಮೌನ ತಾಳಿ ತಳುವಿದರೆ ಇದರ ಹೊನಲು
ಕಣ್ಣೆನಳತೆ ಕುಣಿದಾಡಿ ಸೇರುವುದು ಕಾಣದೂರ ನೆಳಲು :
ಕೆರಳಿ ಗಾಳಿ ಹೊಯ್ದಾಡಿತೆನ್ನು, ಈ ಹೊಗೆಯು ದಿಕ್ಕುಪಾಲು,
ಧೂಪವಳಿದು ನೆಲೆಯುಳಿದು ಹರಿಹರಿದು ಬಿಡುವ ನೂಲು, ನೂಲು !

ತೇಲೆ, ತೇಲೆ, ತೇಲೆ
ಹೊಗೆಯಿದು
ಗಾಳಿಯಲೆಯ ಮೇಲೆ–
ಬಿಸಿಲ ಝಳಕೆ ಕಡಲಾವಿಯಾಗಿ ಮೇ
ಲೆದ್ದು ಹೋದ ಹಾಗೆ,

ಸುಪ್ತ ಚಿತ್ತದಲಿ ಸ್ವಪ್ನಚಿತ್ರ ನಿ–
ಶ್ಶಬ್ದ ಎದ್ದ ಹಾಗೆ;
ಜೊನ್ನ ಕುಣಿತವಿದ ಕಂಡು ಕಂಡು ಜನ
ಮನವು ಕಣ್ಣು ಸೋಲೆ–
ಸಿಗರೇಟಿನೆದೆಯ ಧಗಧಗಿಸುವುರಿಯು ಕುಡಿ
ಪವನ ನಿತ್ಯಲೀಲೆ !

ನಾನು ನೀನು ಸಿಗರೇಟು–ಅಹಹ ! –ಅದೆ ಬಣ್ಣವಣ್ಣ ತಿಣ್ಣ !
ನಮ್ಮ ಬಾಳು ಹೊಗೆ, ಕಾಣದೊಂದು ನಗೆ ಹರಹುತಿರುವ ಬಣ್ಣ !
ಯಾರೊ ಏನೊ ಕುಡಿಕುಡಿದು ಹೊಗೆಯನುಫ್ ಎಂದು ಉಗುಳುತಿಹನು ;
ಹೊತ್ತಿಯುರಿವ ಸಿಗರೇಟು ಬಲ್ಲುದೇನವನ ಸಂತಸವನು ?

ಸಿಗರೇಟು ತೋರುತಿದೆ ; ಹೊಗೆಯು ಏರುತಿದೆ ;
ಕುಡಿವ ಸೊಗಸುಗಾರ
ಯಾವನವನು ? ಕಾಣಿಸದು ಕುಡಿವ ಬಾಯ್, ಹಿಡಿದ ಬೆರಳ ಯುಗಳ,
ಸಿಗರೇಟು ತೀರುತಿದೆ, ಹೊಗೆಯು ಏರುತಿದೆ,
ಹೊಗೆಯೆ ಮೊದಲು ಕೊನೆಯು !
ಈ ಬಾಳ ನನೆಯು, ಕೊನೆಯು !

# ಸಮಾಜ ಭೈರವ

ನನ್ನ ಮನವ ನನಗೆ ಕೊಡು
ಓ ಸಮಾಜ ಭೈರವ ;
ನನ್ನ ನಗೆಯ ನನ್ನ ಬಗೆಯ
ನನ್ನ ಜಗವ ನನಗೆ ಬಿಡು,
ನನ್ನ ಮನವ ನನಗೆ ಕೊಡು.

ತೊಡಿಸ ಬರಲು ಬೇಡ ನಿನ್ನ ಹೊನ್ನ ಸಂಕೋಲೆಯ,
ಬಳಿಕ ಮುಗುಳ ಮಾಲೆಯ ;
ಉಡಿಸ ಬರಲು ಬೇಡ ನನ್ನ ಮನಕೆ ನಿನ್ನ ಚೇಲವ,
ನಿನ್ನ ದಯೆಯ ಸಾಲವ ;
ಬಿಟ್ಟುಬಿಡೋ, ಎಲೆಲೆ, ನನ್ನ ಮನವ ತನ್ನ ಪಾಡಿಗೆ
ತನ್ನ ಹಲವು ಹಾಡಿಗೆ.

ನೀನು ಸಮೆದ ಈ ಪಂಜರ ಅತಿ ಸುಂದರವಹ ! ಮೆಚ್ಚಿಗೆ
ನನ್ನದದಕೆ, ತಕ್ಕುದಯ್ಯ ಅದೇ ನಿನ್ನ ಹುಚ್ಚಿಗೆ
ಬಿಟ್ಟುಬಿಡು ನನ್ನ ಮಾತ್ರ ನನ್ನ ಎದೆಯ ನೆಚ್ಚಿಗೆ ;
ನನ್ನನಲ್ಲಿ ಸೆರೆದೂಡಲು ಮಾಡಬೇಡ ಸಂಚನು,
ಹಾಕಬೇಡ ಹೊಂಚನು.

ನನ್ನ ಮನವು ಹಾಯಬೇಕು ದಿಗ್ದಿಗಂತದಾಚೆಗೂ,
ಏರಬೇಕು ಮುಗಿಲಿನಾಚೆ ತಾರೆಯಾಚೆಯಾಚೆಗೂ,
ಇಳಿಯಬೇಕು ಪಾತಾಳದ ಗಹನ ತಿಮಿರದಾಳಕು,
ಇನ್ನು ಇನ್ನು ಅಗಲಕೂ, ಮೇಲಕೂ, ಆಳಕೂ !

ನುಚ್ಚುನೂರು ನಾನು ನಿನ್ನ ಒಂದೆ ಪದಾಘಾತಕೆ,
ನಿನ್ನ ನಿಃಶ್ವಾಸದೊಂದು ವೀಚಿಘಾತಮಾತ್ರಕೆ ;
ತಳುವು ಕೊಂಚ ; ನೀರಗುಳ್ಳೆ ಕುಣಿದು ಕುಣಿದು ಒಡೆಯಲಿ ;
ಒಡೆವ ಮೊದಲು ಅದರ ಬಣ್ಣದಾಟವನಿತು ತೀರಲಿ,

ತಳವು ಕೊಂಚ, ಓ ಭೈರವ, ಏತಕಿನಿತು ಅವಸರ ?
ಬಂದ ಯಾತ್ರಿ ನಿಲ್ಲಲಾರ—ಅವನೂ ಗಮನಕಾತರ !

ಅಣುವಿನಲ್ಲು ಆ ಮಹತ್ತು ಬಿತ್ತದಂತೆ ಮಲಗಿದೆ ;
ಅದುಮ ಬೇಡ ಅದನು ; ಗಾಳಿ ಬೆಳಕು ಮಳೆಗೆ, ಬಿಸಿಲಿಗೆ
ತೆರವಾಗಲಿ ಅದು ಯಥೇಚ್ಛ ; ಮೊಳೆವ ಕಾಲ ಬಂದರೆ
ಮೊಳೆಯಲೇಳು ಅದು ಅಬಾಧ, ನಿನಗೇನಿದೆ ತೊಂದರೆ ?
ಆ ಹೆಸರೂ ಸೇರದೇನು ನಿನ್ನ ಯಶೋಮಾಲೆಗೆ ?

ಹುಲ್ಲಿಗಿಲ್ಲ, ಕಲ್ಲಿಗಿಲ್ಲ,
ಹೂವಿಗೇಕೆ ಸೌಸವ ?
ಎಂದು ಹಿಸುಕಬೇಡವದನು
ಅದನು ಅದರ ಲಸನಕೆ
ತನ್ನತನದ ತನನಕೆ
ಬಿಟ್ಟುಬಿಡು, ಬಿಟ್ಟುಬಿಡು,
ಓ, ಸಮಾಜ ಭೈರವ !

# ಒಂದು ಸಂಜೆ

ಮೌನ ತಬ್ಬಿತು ನೆಲವ ; ಜುಮ್ಮೆನೆ ಪುಳಕಗೊಂಡಿತು ಧಾರಿಣಿ ;
ನೋಡಿ ನಾಚಿತು ಬಾನು ; ಸೇರಿತು ಕೆಂಪು ಸಂಜೆಯ ಕದಪಲಿ.
ಹಕ್ಕಿಗೊರಲಿನ ಸುರತಗಾನಕೆ ಬಿಗಿಯು ನಸುವೇ ಸಡಿಲಿತು.
ಬೆಚ್ಚ ಬೆಚ್ಚನೆಯುಸಿರಿನಂದದಿ ಗಾಳಿ ಮೆಲ್ಲನೆ ತೆವಳಿತು.

ಇರುಳ ಸೆರಗಿನ ನೆಳಲು ಚಾಚಿತು, ಬಾನು ತೆರೆಯಿತು ಕಣ್ಣನು ;
ನೆಲವು ತಣಿಯಿತು, ಬೆವರು ಹನಿಯಿತು ; ಬಾಷ್ಪ ನನೆಸಿತು ಹುಲ್ಲನು.
ಮೌನ ಉರುಳಿತು, ಹೊರಳಿತೆದ್ದಿತು ; ಗಾಳಿ ಭೋರೆನೆ ಬೀಸಿತು,
ತೆಂಗುಗರಿಗಳ ಚಾಮರಕೆ ಹಾಯೆಂದು ಮೌನವು ಮಲಗಿತು. ೮

## ಅಲಸನ ಹಾಡು

ಕೆಲಸವಿಲ್ಲದವನು ನಾನು,
ಬರಿಯ ಅಲಸನು.

ಹಸಿವಾದರೆ ಎದೆಯನ್ನೆ
ತಿಂಬೆನೆಂದೆನು !
ಕಸುವಿದ್ದರೆ ಅಸುವನ್ನೇ
ಕೊಂಬೆನೆಂದೆನು !
ಉಸಿರಿದ್ದರೆ ನಿದ್ದೆಯನೇ
ತಂದೆನೆಂದೆನು !

ನೋಡುವುದೇ ನನ್ನ ಕೆಲಸ ;
ಇದನೆ ಕೆಲಸ ಎಂಬ ಅಲಸ ;
ಹಾಡುವುದೂ ಒಂದು ವಿರಸ ;
ಅದುವೆ ರಸಿಕನೆಂಬ ಸರಸ !

ಕುಳಿತು ಕುಳಿತೆ ಬಾನೆಡೆಗೇ
ಏರಬಲ್ಲೆನು,
ಮಲಗಿದಲ್ಲೆ ಮುಗಿಲನೆಲ್ಲ
ಸುತ್ತಿ ಬರುವೆನು.

ನಿಂತಲ್ಲಿಯೆ ಮನದ ಪಾ
ತಾಳಕಿಳಿದು ಬರುವೆನು ;
ಮೀನು, ಮೊಸಳೆ, ಮುತ್ತು ರತ್ನ
ಏನೇನನೊ ತರುವೆನು.

ಗಾಳಿ ಬೀಸುತಿರಲು ಮನವ
ಗಾಳಿಪಟವ ಗೈವೆನು;
ಹೊನಲು ಹರಿಯುತಿರಲು ಎದೆಯ
ನಲ್ಲಿ ತೇಲಿ ಬಿಡುವೆನು.

ಜಗವು ನಗುತಲಿರಲು ಅಲ್ಲೆ
ಕುಳಿತು ಎದೆಯ ತೊಳೆವೆನು ;
ಜಗವು ಅಳುತಲಿರಲು ನಾನು
ಶೋಕವಾಗಿ ನಿಲುವೆನು.

ಚೆಲುವು ನಗಲು ನಾನು ಎದೆಯ
ಒಳಗೆ ಸೇರಿ ನಲಿವೆನು ;
ಒಲವು ಕದವ ಬಡಿಯೆ ನಾನು
ಮುಗಿಲ ಕಡೆಗೆ ನೆಗೆವನು !

ಮಾತಿನ ಬಿರುಗಾಳಿಗಂಜಿ
ಕುಸಿಯುತಿರುವೆನು ;
ಮೌನದ ಋಜುಭಾಷಿತಕ್ಕೆ
ಹಸಿಯುತಿರುವೆನು !

ಕೈಯನೆತ್ತಲಾರೆ, ಮೈಯ
ನಲುಗಿಸಲಾರೆ ;
ಬರುವುದೆಲ್ಲ ಬರಲೊಂದನು
ತೊಲಗಿಸಲಾರೆ !

ಕೆಲಸವಿಲ್ಲದಿವನು ನಾನು
ಬರಿಯ ಅಲಸನು !

# ಅತಿಥಿಗಳು

ಅದೃಶ್ಯಲೋಕದ ಅನೂಹ್ಯ ರೂಪದ
ಅನಂತಕಾಲದ ಯಾತ್ರಿಕರೇ,
ಮಣ್ಣಿನ ಮನದಲಿ ಹೊನ್ನನೆ ಬೆಳೆಯುವ
ಅಪೂರ್ವ ತೇಜದ ಮಾಂತ್ರಿಕರೇ !–
ಅತಿಥಿಗಳಹ ನೀವೆಲ್ಲರು ಇಲ್ಲಿಗೆ
ನೆಲಸಲು ಬಂದವರಲ್ಲ ;
ಒಂದೆ ಗಳಿಗೆ ಆಮೋದಕೆ ಬರುವಿರಿ ;
ಬಂದರಗಳಿಗೆಯೊಳೇ ಮೈಗರೆವಿರಿ ;
ವಿಜನ ವಿಜನ ಮನವು;
ಶೂನ್ಯ ಶೂನ್ಯ ದಿನವು.

ಇದಿಗೋ ಬಂದೆವು ಬಂದೆವೆನ್ನುವಿರಿ,
ಎದೆಗೋ ನೆನಪಿನ ಬೆಂಕಿಯನೆರೆವಿರಿ ;
ಎಂದೂ ಇಲ್ಲದ ಆಶೆತವಕಗಳ
ಒಂದೊಂದೇ ಹೊಸ ಬಯಕೆ ಬವಣೆಗಳ
ತಂದು ಕೂಡಿ, ಗರಿಮೂಡಿ ಹಾರುವಿರಿ–
ವಿಜನ ವಿಜನ ಮನವು,
ಶೂನ್ಯ ಶೂನ್ಯ ದಿನವು !

ದಟ್ಟ ನೆಳಲ ಕೆಳಗಲಲುವ ಕೊಳದೊಳು
ಥಟ್ಟನೆಲರು ಸುಳಿಯಲು ಎಲೆ ಎಲೆಗಳು
ಕದಲಿ ಕದಲಿ ಕಂಗೊಳಿಪ ಜರಡೆಯೊಳು
ಬೆಳಕಿನ ಕುಡಿಗಳು, ಮಿಡಿನಾಗರಗಳು
ತೂರಿ ಜಾರಿ ಬಂದೆರಗಿ ಹೋಗುವೊಲು
ಬರುವಿರಣ್ಣ ಈ ಮನಕೆ ಥಟ್ಟನೆ

ಹೇಳುವಂತೆ ಹೊಸತೊಂದು ಗುಟ್ಟನೆ
ನಟಿಸಿ ಅಟಮಟಿಸಿ ಪುಟಿದು ಹೋಗುವಿರಿ ;
ಅಂತೆ ಪುಟಿಯ ಬೇಡಿ,
ಎದೆಯನು ಸೇರಿ ಮನೆಯ ಮಾಡಿ !

ಬೆಳಗಾಗಲು ಎವೆ ತೆರೆಯುವ ಮೂಡಲ
ಮಡಿಲಲಿ ಮಲಗಿದ ಹಕ್ಕಿ ಹಕ್ಕಿಗಳ
ಕೊಗಳ ಗೀತದಲಿ ಕೆರಳುವ ಹೊರಳುವ
ಸುಂದರ ಸುಮಧುರ ನಾದರೂಪರೇ,
ತಳಿರು ತಳಿರಿನಿಬ್ಬನಿಯ ಗೋಳದಲಿ
ಮೇಳಗೊಂಡು ಮೆರೆಮೆರೆವ ಭೂಪರೇ,
ಅರಳು ಮೊಗ್ಗಗಳ ಕಂಪುದಾರಿಯಲಿ
ಅಲೆವ ಅನಂತದ ಯಾತ್ರಿಕರೇ !
ಬನ್ನಿ, ಬನ್ನಿ, ಬನ್ನಿ,
ಇಲ್ಲೇ ಇರಲು ಬಂದೆವೆನ್ನಿ !

ಕುಳಿತು ನೀವು ಬೆಳ್ಮುಗಿಲಿನ ರಥದಲಿ
ನೊರೆಮೊರೆದೇರುವ ತಾರಾಪಥದಲಿ
ನಲಿದು ಕಲೆದು ಕಿಲಕಿಲನೆ ನಕ್ಕು ಆ–
ನಂದದ ಆಟದಲಿ
ಮೈಮರೆತಲೆವೆಲೆ ಮುದ್ದುಮಕ್ಕಳೇ,
ಬಾನಿನೂರಿನಲಿ ನೆಲಸಿದೊಕ್ಕಲೇ,
ಬನ್ನಿ, ಬನ್ನಿ, ಬನ್ನಿ ;
ಇಲ್ಲೇ ಇರಲು ಬನ್ನಿ, ಬನ್ನಿ !

ಮಳೆಬಿಲ್ಲಿನ ತೂಗುಯ್ಯಲನೇರಿ
ತೂಗಿ ತೂಗಿ ಭೂತೀರವ ಸೇರಿ
ತುರುಗಿ ತುರುಗಿ ಬಂದೆರಗುವಿರಹಹಾ !
ವಿಜನ ವನದ ಕಾಸಾರತೀರಕೆ

ಬರುವ ಜಿಂಕೆಯಂತೆ,
ಒಣಗುನೆಲದ ಒಣ ಬಾಯ್ದೆರೆಗಿಳಿಯುವ
ಜೇನ ಹನಿಗಳಂತೆ;
ನಲಪಿನಲ್ಲಿ ಮೈಗರೆದ ಮನವು ಮೈ
ಅರಿತು 'ಬಂದಿರಾ ?' ಎನ್ನುವ ಮುನ್ನವೆ
ಹಾರಿ ನೆಗೆಯ ಬೇಡಿ,
ಎದೆಯನು ಸೇರಿ ಮನೆಯ ಮಾಡಿ.

ನೀವಿಲ್ಲದೆ ಈ ಮನದೊಳಗೇನಿದೆ ?
ನೀವಿದ್ದರೆ ಹೂವಿದೆ ಹೊಸ ಜೇನಿದೆ;
ಬಾನಿನ ಕಳೆಯಿದೆ, ಗಾನದ ಬೆಳೆಯಿದೆ,
ಮುಗಿಲ ಮಲ್ಲಿಗೆಯ ಎಳೆತ ಸೆಳೆತವಿದೆ,
ವೃಂದಾವನವಿದೆ, ಕಲ್ಪವೃಕ್ಷವಿದೆ,
ಅದು ಇದೆ, ಇದು ಇದೆ, ಎಲ್ಲ ಎಲ್ಲ ಇದೆ ;
ನಿಮಗಾಗಿಯೆ ಈ ಮನದರಮನೆ ಇದೆ
ತೆರವು, ತೆರವು, ತೆರವು, ತೆರವು ;
ನಿಮಗಾಗಿಯೆ ಎದೆಗದ್ದುಗೆ ಕಾದಿದೆ,
ಬರಿದು, ಬರಿದು, ಬರಿದು ;
ಕನಸಿನ ಲೋಕದ ಬಣ್ಣ ಬಣ್ಣ ತಳೆದಣ್ಣರೆ, ಐತನ್ನಿ !
ನನ್ನಿಯ ನಾಡಿನ ಚಿಣ್ಣರೆ,
ನನ್ನೊಳಗಣ್ಣಿನ ಸಣ್ಣಸಣ್ಣರೇ,
ಬನ್ನಿ, ಬನ್ನಿ, ಬನ್ನಿ ;
ಇಲ್ಲೇ ನೆಲಸಿ ; ಬನ್ನಿ, ಬನ್ನಿ !
ಅತಿಥಿಗಳಹ ! ನೀವೆಲ್ಲರು ಇಲ್ಲಿಗೆ
ನೆಲಸಲು ಬಂದವರಲ್ಲ ;
ಒಂದೆ ಗಳಿಗೆ ಆಮೋದಕೆ ಬರುವಿರಿ,
ಬಂದರಗಳಿಗೆಯೊಳೇ ಮೈಗರೆವಿರಿ,
ವಿಜನ ವಿಜನ ಮನವು,
ಶೂನ್ಯ ಶೂನ್ಯ ದಿನವು !

# ಭಾರತದ ತಂದೆ ಗಾಂಧಿ

ನಿನ್ನನರಿತು ನೋಡಲೂ ನಿನ್ನ ಕುರಿತು ಹಾಡಲೂ
ಕೋಟಿ ಕೋಟಿ ಜನದ ಮನದ ವ್ಯಥೆಯನೆಲ್ಲ ತೋಡಲೂ
ಅಯ್ಯೊ, ನಾ ಅಪಾತ್ರ, ತಂದೆ ;
ಬರಡು ನೆಲದ ಬೀಜ ನಾನು,
ಮರದ ಫಲದ ವರದ ಕನಸು ಕಾಣುವಂಥ ದೀನನು,
ಶಕ್ತಿಹೀನ, ಭಕ್ತಿಹೀನ, ಮಹಾಮ್ಲಾನನು.
ಆದರೇನೊ ಪುಣ್ಯಲೇಶದಿಂದ
ನಿನ್ನ ದಿವ್ಯ ಪಾದ
ತುಳಿದ ಕಾಲದೇಶದೊಳೇ
ಬದುಕಿ ನಾ ಕೃತಾರ್ಥನು

ಯಾವ ಬಿತ್ತೊ ನಾನು ಅದೇ
ಇದೇ ನೆಲದ ಬಸಿರಲಿ
ಬಾನೆತ್ತರ ಬೆಳೆವಂದವ,
ಆ ಚಂದವ, ಬಿಸವಂದವ
ನಿನ್ನೊಳಣ್ಣ ಕಂಡೆನು ;
ಅತ್ಯುನ್ನತ ಸುರಭೂಜವ–
ನಿಲ್ಲೆ ನೆಲದಿ ಕಂಡೆನು,
ಅಂತೆ ನಾನು ಧನ್ಯನು !

ಅದೂ ನಾನೆ ನನ್ನದೇನೆ
ಎಂದು ಮನಕೆ ತಂದೆನು ;
ಒಂದೆ ನಿಮಿಷ ನಿನ್ನಗಾಧ
ಮಹಿಮೆಯೊಳಕಿಳಿದೆನು ;

ನಿನ್ನ ದಿವ್ಯಕಾಂತಿಯಲ್ಲಿ
ಕರಕರಗಿದೆನಳಿದೆನು.

ಒಳಗಣ್ಣಿಗೆ ಕಂಡ ಹಾಗೆ
ಕರಳು ಕೂಗಿ ಮೊರೆದ ಹಾಗೆ
ಗಿರಿಶಿಖರವು ಬೀಳಲು
ತಳದ ಪುಟ್ಟಕಲ್ಲು ಅಳಲಿ
ಮೊರೆಯುವಂತೆ ತೊರೆಯೊಳು
ಹಾಡಲೆಂದು ಬಂದೆ ತಂದೆ
ನನ್ನ ಸಣ್ಣ ನುಡಿಯೊಳು.

ಬಹು ವಿಶಾಲ ಆಲದವೊಲು ಮೇಲೆ ಬಿಸಿಲ ಬೇಗೆಗೆ
ಒಡ್ಡಿ ನಿನ್ನ ಮೈಯ ನಿನ್ನ ದಟ್ಟತಂಪು ನೆಳಲಿಗೆ
ಕರೆದೆಯಲ್ಲ ಮನುಕುಲವನು ; ಕಲಕಲಗಳ ಮೇಳಕೂ
ತಂದೆ ನೀನು ತಂದೆಯೊಂದು ಶ್ರುತಿಶುದ್ಧಿಯ ಸೊಬಗನು.

ಮೇಲು ಕೀಳು ಇಲ್ಲವಲ್ಲಿ; ಇಲ್ಲ ಲಿಂಗಭೇದವು,
ಜಾತಿಮತ ವಿರೋಧವೂ, ವಾದವೂ ವಿವಾದವು.
ಸೋದರತೆಯ ಸಾಮಗಾನಲಹರಿ ನಿನ್ನ ಸುತ್ತಲೂ ;
ಸಮಭಾವದ ಸುಮಧುರ ಗತಿ ಬಾಳುಬಾಳನೆತ್ತಲು.
ಸತ್ಯದ ವ್ರತ, ತ್ಯಾಗದ ಪಥ, ಜನಸೇವಾ ಶಪಥವು,
ಶಾಂತಿ, ದಾಂತಿ, ನಿಗ್ರಹ, ಧೃತಿ, ಜೀವದಯಾ ಯೋಗವು.

ಮೂಲಶಕ್ತಿಯಲ್ಲಿ ಭಕ್ತ, ದೀನದಲಿತರಲ್ಲಿ ರಕ್ತ,
ಭವದ ನೂರು ಎಳೆತ ಸೆಳೆತದಲ್ಲಿ ಕಲ್ಲಿನೊಲು ವಿರಕ್ತ,
ಜರೆದವನನು ಹರಸಬಲ್ಲ, ಇರಿದವನನು ಉಳಿಸಬಲ್ಲ
ತಾನೆ ಬೆಂದು ತಾನೆ ನೊಂದು ಅರಿಯದೆಯನು ಅರಸಬಲ್ಲ
ನೀ ಮಹಾತ್ಮನು !

ಸತ್ತ ಜನನವೆತ್ತಿದಂಥ ಸಂಜೀವನ ಶಕ್ತಿ ನೀನು ;
ಉತ್ತು ಮನವನಲ್ಲಿ ಒಲವ ಬಿತ್ತಿದಮರ ದೀಪ್ತಿ ನೀನು ;
ಕಗ್ಗತ್ತಲ ಪಾಳೆಯದೊಳೆ ಬೆಳಕಿನ ಬಾವುಟವನು
ಏರಿಸಿ ಹಾರಿಸಿದ ವೀರಧೀರ ದೇವದೀಪ ನೀನು ;

ನಮ್ಮಂತೆಯೆ ಬಾಳಿ ಕೂಡ ನಮ್ಮ ಗುರಿಯ ಗಿರಿಯ ಕೋಡ
ಏರಿ ನಿಂತೆ ನೀನು ಹೆಜ್ಜೆ ಹೆಜ್ಜೆ ಮೇಲಕೇರುತ ;
ಶಿಖರದಲ್ಲಿ ನಿಂತು ಕೂಡ ಮರೆಯಲಿಲ್ಲ ನಮ್ಮನು;
ತೊರೆಹರಿಯಿತು ನಿನ್ನ ಹೃದಯ ತೊಳೆಯಲೆಂದು ನಮ್ಮನು ;
ತೋಳನೆರಡನೆತ್ತಿ ನೀನು ಮೊರೆದೆ ದಿಕ್ಕುದಿಕ್ಕಿಗೆ ;
"ಧರ್ಮದಿಂದ ಅರ್ಥ, ಕಾಮ ; ಶರಣಾಗಿರಿ ಧರ್ಮಕೆ ;
ಬದುಕಿಸುವುದ ಕಲಿತು ಬದುಕಿ.
ಎದೆ ಎದೆಯೊಳು ಒಲವ ಬೆದಕಿ ;
ಕಟ್ಟಿಕೊಳ್ಳಬೇಡಿ ನಿಮ್ಮ ನಡುವೆ ಸಣ್ಣ ಗೋಡೆಯು,
ಕಿತ್ತೊಗೆಯಿರಿ ಮನುಪುತ್ರರೆ, ನಿಮ್ಮ ನಖವ, ದಾಡೆಯು ;
ಹಿಡಿದು ನಡೆಯಿರಣ್ಣ ನೀವು ಸೋದರತೆಯ ಹಾದಿಯ.—"
ಎಂದೆ ನೀನು ; ಅಂತೆ ನಡೆದೆ ; ನಡೆಯು ನುಡಿಯ ಮೀರಿತು ;
ನಮ್ಮ ಕಣಸುಹಾಳಿಗಳಲಿ ನಿನ್ನ ಮಾತು ಸೇರಿತು,

ನಿನ್ನ ಕಂಡು ಬೆರಗಾದರು, ನಿನಗೆ ನಮೋನಮ ಎಂದರು,
ನಿನ್ನ ಹೊಗಳಿ ಹಾಡಿದರು, ಹಣ್ಣುಕಾಯಿ ತಂದರು ;
ನಿನ್ನ ಪಥವ ಮರೆತು ನಿನ್ನ ಪದಕೆ ಬಿದ್ದ ಅಂಧರು
ನಿನಗೆ ಗುಡಿಯ ಕಟ್ಟಿ ತಾವು ಬಚ್ಚಲಲ್ಲೆ ನಿಂದರು
ಅಮೃತ ಬಂದು ಮನೆಯ ಮುಂದೆ ಹರಿಯುತಿದ್ದರೂ
ವಿಷವನರಸಿ ಹೊರಟರಯ್ಯೊ ಈ ಮತಾಂಧರು.
ನೀ ಹರಡಿದ ಹಿರಿಬೆಳಕನು ನುಂಗುತಿರಲು ಕತ್ತಲು,
ದ್ವೇಷಾಗ್ನಿಯು ದಳ್ಳಿಸುತಿರೆ, ಕೊಲೆಸುಲಿಗೆಯು ಸುತ್ತಲೂ,
ನೊಂದೆ ನೀನು ; ನಿನ್ನುದಗ್ರ ಚೇತನವೂ ಅದುರಿತು,

ಜಗವನೆಲ್ಲ ಹಬ್ಬಿದಂಥ ನಿನ್ನಾತ್ಮವು ಮುದುರಿತು ;
ನೀನೆತ್ತಿದ ಒಲವಿನ ಗುಡಿ ನೆಲಕೆ ಕುಸಿಯ ತೊಡಗಿತು :
ನಿನ್ನ ಭಕ್ತಿ ವಿಶ್ವಾಸದ ಮೇರು ಕೂಡ ಸಡಿಲಿತು ;
ನರಲೋಕದ ಶುಭದ ನೌಕೆ ಕೆಳಬಂಡೆಗೆ ಬಡಿಯಿತು.

ಬರಸಿಡಿಲಂತೆರಗಿತು ಹಾ ! ಕೊಲೆಗಡುಕನ ಕೈ ;
ಜರಾಜೀರ್ಣ, ತ್ಯಾಗಶೀರ್ಣ ಎಲುಬುಗೂಡು ಮೈ
ಬಿತ್ತು, ಕೆಳಗೆ, ಬಿದ್ದ ಹಾಗೆ
ನ್ಯಾಯಸತ್ಯದಯಾಧರ್ಮದೊಂದೆ ಆಧಾರವು ;
ನಮ್ಮ ತಲೆಯ ಮೇಲೆ ಬಿತ್ತು
ನಮ್ಮ ಪಾಪಭಾರವು !

ಹಾ ರಾಮಾ ! ಎಂಬಾ ಮಡಿ
ನುಡಿಯೆರಡರ ರೆಕ್ಕೆ ಜೋಡಿ
ಬಡಿಯಿತೊಮ್ಮೆ, ಬಳಿಕ ಮೌನ ;
ತಲೆಬಾಗಿತು, ಕೈ ಮುಗಿಯಿತು ;
ಬಳಿಕ ಮೌನ, ಮೌನ !
ಹಾರಿತಯ್ಯೊ, ತಂದೆ, ನಿನ್ನ
ಜೀವ ವೈನತೇಯವು,
ನಿನ್ನ ನಿರಿದ ನಮಗಂಟಿತು
ಮಾಯದಂಥ ಗಾಯವು.

ನಂಬಲೆಂತು, ನೆಂಬಲೆಂತು, ಇಂಥ ಘೋರವಾರ್ತೆಯ ?
ಕೋಟಿಕೋಟಿ ಜನದ ಶೋಕವಾಣಿ ಆಕಾಶವಾಣಿ
ಮರಳಿ ಮರಳಿ ಮೊರೆದರೆ,
ನಂಬಲೆಂತು ನಮ್ಮ ತಂದೆ, ಕೋಟಿಕೋಟಿ ಜನದ ತಂದೆ
ಇನ್ನು ಇಲ್ಲ ಎಂದರೆ,
ನಾಡಿನೆಲ್ಲ ಕಡೆಯು ನಿನ್ನ ನಡೆಯ ಕಂಪು ನುಡಿಯ ಇಂಪು
ತುಂಬಿರೆ,

ನಾಡುನಾಡೆ ಭೂಮಿತಾಯಿಯಂಥ ನಿನ್ನ ಮರೆತು ಕೂಡ
ಒಳಗೊಳಗೇ ನಂಬಿರೆ,
ನಮ್ಮ ಮತಿಗೆ ನಮ್ಮ ಕೃತಿಗೆ ನಮ್ಮ ಬಾಳರೀತಿಗೆಲ್ಲ
ನೀನೆ ನಿಕಷದಂತಿರೆ,
ಸೋತ ಜನಕು, ಭೀತ ಜನಕು, ದಿಕ್ಕುಗೆಟ್ಟ ದೀನ ಜನಕು
ಆರ್ತರಿಗು, ಅನಾಥರಿಗೂ ನೀನೆ ತ್ರಾಣನಂತಿರೆ,
ಭಾರತವೇ ನೀನು ನೀನೆ ಭಾರತದಂತಾಗಿರೆ,
ಇದ್ದಕಿದ್ದ ಹಾಗೆ ನೀನು ಇಲ್ಲವೆಂದು ಎಂದರೆ,
ನಂಬಲೆಂತು, ಹೇಳು ತಂದೆ, ಇಂಥ ಘೋರ ವಾರ್ತೆಯ ?

ಇಂಥ ಅಳಲನುಲಿಯ ಬಲ್ಲ
ಬಾಯಿಯೆಲ್ಲಿದೆ ?
ಜೀವರತ್ನ ಕಳೆದ ಬಳಿಕ
ಬಾಳೊಳೇನಿದೆ ?
ಕಂಬನಿಗೂ ನಿಡುಸುಯ್ಲಿಗು
ಉಪವಾಸಕು ವನವಾಸಕು
ತೀರದಂಥ ಕಷ್ಟವು ;
ನರಲೋಕದ ತಳಪಾಯವೆ
ಸಡಿಲಿದಂಥ ನಷ್ಟವು :
ಯುಗಯುಗಗಳೆ ಕಳೆಕಳೆದರು
ಸವೆಯದಿಂಥ ಪಾಪವು,
ನವನವೆದರು ಕಳೆಯದಯ್ಯೊ
ನಮ್ಮ ಹೃದಯ ತಾಪವು !

ಇಂದು ದೇಶದೇಶ ಶೂನ್ಯ, ಶೂನ್ಯವೆಲ್ಲ ಹೃದಯವು,
ಇಂದು ವೀರಧೀರ ಮುಖವು ಕೂಡ ನೋಡು ಸಭಯವು.
ಅಮೃತವಿಂಗಿ ಹೋಯ್ತು, ಇನ್ನು ವಿಷದಾಳಿಕೆ ಸುಲಭವು ;
ಕರ್ಣಧಾರನಿಲ್ಲವಿನ್ನು ಬಾಳ ದೋಣಿ ಅಲೆವುವು,

ತೆರೆತರೆಯೂ ಮಸಗಿ ಮಸಗಿ ಇನ್ನು ಅದನು ನೊಣೆವುದು !
ಕಂಡ ಕಣಸು ಕೊನೆಗಂಡಿತು, ಜ್ವಲನದಾಸೆ ಹಿಂಗಿತು,
ಹೊಂಡದಲ್ಲೆ ಭಂಡಬಾಳು, ಮುಗಿಲಿನಾಸೆ ಮುಗಿಯಿತು.
ಕಾಣದೂರ ದಾರಿಯಲ್ಲಿ ಬೆಳಗುತಿದ್ದ ದೀಪವು
ಆರಿಹೋಯ್ತು ; ಇನ್ನು ಕತ್ತಲಲ್ಲೆ ಚಿರ ವಿಲಾಪವು.
ಅಳಿದರೇನು, ಉಳಿದರೇನು ನಮ್ಮಂಥ ಕನಿಷ್ಠರು ?—
ನರಲೋಕದ ನತದೃಷ್ಟರು, ಶ್ರೇಯಃಪಥಭ್ರಷ್ಟರು ?
ನೀನು—ಎಲ್ಲೊ ಒಮ್ಮೆ ನೆಲದ ತಪದ ಪುಣ್ಯಪಾಕಕೆ
ಮೊಳೆತು ಬರುವ ದೇವಬೀಜ ; ಯುಗಯುಗಗಳ ಶೋಕಕೆ
ಬರುವ ಶಾಂತಿ ತೇಜ ; ಬುದ್ಧಕ್ರಿಸ್ತ ರತ್ನಮಾಲೆಗೆ
ಸೇರಿದಂಥ ರತ್ನರಾಜ ; ಇನ್ನು ಇಂಥದೆಲ್ಲಿದೆ,
ನಮ್ಮ ತಂದೆ, ನಮ್ಮ ಗಾಂಧಿ, ನಮ್ಮ ಬಂಧುವಲ್ಲದೆ ?

ಹೋದನವನು ದೂರದೂರ ; ಮೂಲಕಾಂತಿಯೊಡಲಲಿ
ಕರಗಿಹೋದ ; ಅರಗಿಹೋದ ಹಿರಿಬೆಳಕಿನ ಕಡಲಲಿ ;
ನಾವು ಇಲ್ಲನಾಥರಾಗಿ ಅತ್ತು ಕೂಗಿ ಕರೆದರೂ
ಬಾರನವನು ; ಅವನ ದಯೆಯ ನಗೆಯು ಇನ್ನು ಹೊಳೆಯದು ;
ಅವನ ಸೂಜಿಗಲ್ಲು ಬಾಳು ನಮ್ಮನಿನ್ನು ಸೆಳೆಯದು ;
ಅವನ ನುಡಿಯ ವೇದಘೋಷ ಇನ್ನು ಇಲ್ಲಿ ಮೊಳಗದು ;
ಇನ್ನು ಅವನ ಬೆಳಕಿನಲ್ಲಿ ನಮ್ಮ ಬಾಳು ಬೆಳಕಿದು ;
ಮಕ್ಕಳೊಡನೆ ಮಗುವೆ ಆಗಿ, ದೀನರಲ್ಲಿ ದೀನನಾಗಿ
ಎಲ್ಲ ಜನರು ಸತ್ವ ಶಾಂತಿ ಸಾಂತ್ವನದ ನಿಧಾನನಾಗಿ
ಹೋದನಯ್ಯೊ, ಬಾರನಿನ್ನು ಆ ಅಜಾತಶತ್ರುವು,
ನಮ್ಮ ತಾಯಿ, ನಮ್ಮ ತಂದೆ, ನಮ್ಮ ಬಂಧು ಬಳಗವು !

ಆದರಿನ್ನು ಇಲ್ಲೆ ಇಹುದು ಅವನ ಜೀವಸಾರವು
ಮೊರೆಯುತಿಹುದು ಇನ್ನು ಇಲ್ಲೆ ಅವನ ದನಿ ಉದಾರವು ;
ಹೆಜ್ಜೆ ಹೆಜ್ಜೆ ಮೂಡಿದಂಥ ಅವನ ಬಾಳ ದಾರಿಯು ;
ಮೆಟ್ಟುಮೆಟ್ಟಲಾಗಿ ಅವನು ಏರಿದಂಥ ಶಿಖರಿಯು ;

ನಾಡ ಮೂಲೆಮೂಲೆಯಲ್ಲು ಅವನ ಮೇಲುಪಂಕ್ತಿಯು ;
ಬೆಳಗುತಲಿದೆ ಮನಮನದಲಿ ಅವನ ದೇವಕಾಂತಿಯು.

ಏಳುವವರೆ ಏಳಿ ; ಎದ್ದು ಹಿಡಿಯಿರವನ ಪಥವನು,
ಬಾಳುವವರೆ, ಇದ್ದು ಬಾಳಿ ಅವನ ವೀರವ್ರತವನು,
ಏರುವವರೆ, ಏರಿ ಅವನು ಏರಿದಂಥ ರಥವನು,
ಮುಟ್ಟುವವರೆ, ಮುಟ್ಟಿ ಅವನು ತೋರಿದಂಥ ಗುರಿಯನು,
ಪಡೆಯುವವರೆ, ಪಡೆಯಿರವನ ಆತ್ಮದಮರ ಸಿರಿಯನು ;
ಅವನ ದಾರಿಯೊಂದೆ ದಾರಿ ; ಉಳಿದುದೆಲ್ಲ ಹಳುವವು ;
ಅವನ ಗುರಿಯೆ ಗುರಿಯು, ಉಳಿದುದೆಲ್ಲ ವಿಫಲ ಚಪಲವು ! ೧೯೫೮

# ನಡೆದು ಬಂದ ದಾರಿ

ನಡೆದು ಬಂದ ದಾರಿಕಡೆಗೆ
ತಿರುಗಿಸಬೇಡ,-
ಕಣ್ಣ –
ಹೊರಳಿಸಬೇಡ.

ಮಬ್ಬಿಗಿಳಿದ ಸಾಲುಸಾಲು ಅಮೃತಶಿಲೆಯ ಗೋರಿ,
ಕತ್ತಲೆದೆಯ ಚೂರಿ ;
ಮನದ ಮಕ್ಕಳೆಲ್ಲ ನಕ್ಕ ಮಲ್ಲಿಗೆಬನ ತೋಟ,
ಮರೆದು, ಮಸಣವಾಟ.
ಹಲಸು ಮಾವು ಆಲಬೇಲ ಸೆರಗನೆತ್ತಿ ಕಣ್ಣಿಗೆ,
ಸುಯ್ಯುವೆಲರು ತಣ್ಣಗೆ ;
ಕಮಲದೆದೆಯ ಅಳಿ ಪರಾಗ ರಾಗ ಕಾಲಕೂಟ,
ವಿರಹ ಚಿತ್ರಕೂಟ ;
ಹಸುಳೆ ಚಂದ್ರ, ಮೇಘತಂದ್ರ, ನಿಶಾನಾಗಬಂಧ,
ಉಸಿರು ಮಂಥ, ಮಂದ,
ಕಂಬನಿಗಳ ಕಾರಿ ಖಾರಿ ತಳಮಳಿಸಲು ಸುತ್ತಲೂ
ತೆಂಗು ತಲೆಯನೆತ್ತಳು ;
ಇಳಿದ ಕಡಲು, ಕೊರೆದ ಮಳಲು ; ಉಡಿದ ಹಾಯಿ ಹರಕಲು,
ಒಡೆದು ಹಡಗು ಬೋರಲು.
ಆಹಾ, ಕೊಳದಿ ಬಾಲರವಿಯ ಅಂಬೆಗಾಲ ಲೀಲೆ,
ಅಲೆಯ ವಲಿಯ ಮೇಲೆ,
ಹಿನ್ನೋಟದ ದಿಣ್ಣೆತಲೆಯ ಚಿಮ್ಮಿ ಹಾರು ಮುಂದೆ,
ನೋಡಬೇಡ ಹಿಂದೆ !

ಮುಂದೆ ನೋಡು ದಾರಿ ಸಾವಿರಾರು ಮೈಲಿ ದೂರ,
ಸಾಲುಸಾಲು ಡೇರ ;
ಮರಳು ಕಾಡು, ತಲೆಯ ಓಡು, ಎಲುಬುಗೂಡು ಮೆಟ್ಟಿಲು
ಜೀವ ಪಟ್ಟ ತೊಟ್ಟಿಲು.
ಹೆಜ್ಜೆಗೊಂದು ಬಿಸಿಲುಗುದುರೆ ಬೆನ್ನನೇರಿ ತೂಗಿ,
ಮುಂದೆ ದಾರಿ ಸಾಗಿ ;
ಕರೆಯುತಿದೆ ಅಲ್ಲಿ ದೂರ, ಬೆಳುದಿಂಗಳ ತಾರಿ,
ಕನಸುಹಾಯಿ ಹಾರಿ ;
ಬೆಳ್ಳಿಯಿರುಳು, ಮಂಜುಮಜಲು, ತಾರೆಮಹಲು ದಾಟಿ,
ದಿಗ್ದಿಗಂತ ಮೀಟಿ.
ಗುಳ್ಳೆಗುಳ್ಳೆದನಿಯ ಮೇಲೆ ಮಳೆಯ ಬಿಲ್ಲು ಬಾಗಿ,
ಹೇಗೋ ಮುಂದೆ ತೂಗಿ ;
ಆ ಅಪಾರ ನೀಲಲೋಲ ವೀಚಿಜಾಲ ನೂಕಿ,
ಆಚೆ ಕಾಲು ತಾಕಿ ;
ಪಾರಿಜಾತ ತೋಟದಲ್ಲಿ ಪಾರಿವಾಳ ಮೂರು,
ಗೋಪುರತುದಿಗೇರು ;
ಶುನಶ್ಶಪಾಕ, ದ್ವಿಜಬಲಾಕ, ಗಜಗೋಬಕ–ಸರಿಗಮ,
ಹಳ್ಳ ತಿಟ್ಟು ಸರಿಸಮ.
ಗೋಳಗಾಜು ಝುಗ್ಗನೊಡೆದು ನಗ್ನದೀಪ ಸಂಭ್ರಮ,
ಕೃಷ್ಣ ಬುದ್ಧ ಅಲ್ಲಮ.

ನಡೆದುಬಂದ ದಾರಿಕಡೆಗೆ
ತಿರುಗಿಸಬೇಡ,
ಕಣ್ಣ
ಹೊರಳಿಸಬೇಡ.

# ಗಾಂಧಿ

ಗಾಂಧಿ, ಗಾಂಧಿ, ಗಾಂಧಿ !
ಈ ಬಚ್ಚಲ ಕಗ್ಗವಿಯಲಿ
ತಮದ ಸಂತೆ ಗದ್ದಲದಲಿ
ಬಂತೆಲ್ಲಿಂದೆಂತು ಹೇಳು
ಈ ಅಮೂಲ್ಯ ಮಾಲು–
ನಾಲಗೆಗುಡಿ ಚೆಂಬೆಳಕುಲಿ
ಕುಡಿದೀಪದ ಸಾಲು ?

ಬಾನ ಕರುಳು ಕರಗಿತೋ,
ಮುಗಿಲ ಕಣ್ಣು ಹನಿಯಿತೋ,
ಬೀದಿಯಲ್ಲಿ ಬಿಂದು ಬಿಂದು
ಬೆಳಕು ಬಂದು ಕುಣಿಯಿತೋ !

ಇಲ್ಲ ? ನೋಡು ಸುತ್ತಲೂ ;
ಒಳಗೆ ಕಾಳ ಕತ್ತಲು.
ಅವಳೆ ಬೆಳಕ ಹೆತ್ತಳೋ,
ನಾಲಗೆಗದನಿತ್ತಳೋ,
ಹೆತ್ತು ಆದನು ತುತ್ತಲು
ಹೊಟ್ಟೆಯಲ್ಲಿ ಹೊತ್ತಳೋ !

ಬಚ್ಚಲಲ್ಲಿ ಬೆಳೆವ ಕೊಳೆ
ಬಗೆವುದೇನೊ ಇಂತು :
ಈ ಹೊಸ ಸರುಗಂಪು, ಸೊಂಪು,
ಈ ಪದಂಪು, ಈ ತಂಪು

ದೂರದ ದಿವಮಂದಾರದ ಗಂಧದ ಗಣೆಯಿಂದ
ಬಂತು. ಬಂತೆ ? ಬಂದಿತ್ತೆ ?
ಕೊಳೆ ಕಂಪನು ಬಯಸಿತ್ತೇ ?
ಓವ್ಹೋ, ಬರಿ ಕನಸು ಮತ್ತೆ !
ಬಚ್ಚಲಲ್ಲಿ ಕೊಚ್ಚೆಯು,
ರೊಚ್ಚೆಯೋ ರೊಚ್ಚೆಯು !

ಕಾಡನಲೆವ ನರಪಶುಮನ
ಮಿಡುಕಿತೊಮ್ಮೆ, ಹುಡುಕಿತು ;
ಹೃದಯತಳದ ಗೂಢನಿಧಿಯ
ನೆನಪು ಮನಕೆ ದುಡುಕಿತು.
ರಕ್ತ ಬಸಿವ ಹಸಿಮಾಂಸವ
ನೆಕ್ಕುತಿರುವ ನಾಲಗೆ,
ತೊಗಲುಚೀಲದಾವೇಶಕೆ
ಒತ್ತುತಿರುವ ಒಳಬಗೆ ;
ತೊಡೆಯೆದೆಗಳ ರೋಮಾಂಚಕೆ
ಬೀದಿವರಿವ ಬೆಳ್ನಗೆ ;
ಇಂದು ಏಕೆ ಭಣ ಭಣ ?
ಏಕೆ, ಏನು ಕಾರಣ ?

ಬೇಸರೋ ಬೇಸರು ;
ಒಳಗೆ ಹಾಕೊ ಆಸರು;
ಕತ್ತಲಲ್ಲಿ ಮಿಂಚಿನ ಮರಿ
ತಿವಿವುದಹಾ ಗರಿ ಕೆದರಿ,
ಬೀಳುತಿದೆ ಜೇನ ಸರಿ :
ಒಲವು, ಒಲವು, ಒಲವು !
ಎಂಥ ಸೆಳವು, ಏನು ನೋವು !

ಬಾನ ತುಟಿಯು ಬುವಿಯ ತುಟಿಯು
ಮಾಟಿ ಹೋಯಿತೋ,
ಕನಸಿನೀಟಿ ಮನವ ನಾಟಿ
ದಾಟಿ ಹೋಯಿತೋ ;
ಒಳದ ತಳದ ಮುದ್ರೆಯೊಡೆದು
ಚಿಲುಮೆ ಚಿಮ್ಮಿತೋ,
ಹೃದಯ ತಾನೆ ಕಡೆದ ಬೇನೆ
ಬೆಣ್ಣೆ ತೇಲಿತೋ–

ಒಳ ಹೊರಗೂ ದಿಗಿಲು, ಬೆರಗು ;
ಕಲ್ಲಿನಂಥ ಮನ ಮುಗುಳು ;
ಕಾಣಲಿಲ್ಲ ಈವರೆಗೂ
ಇದು ಏನಹ ಯಾವ ಬಿಡುಗು :
ಭೋಂಕನೆದೆಯ ಅವುಂಕುತಿರುವ
ಯಾವ ತಟಿತ್ಸ್ಪಂದವು,
ಇದೆಂಥ ದಿಗ್ಬಂಧವು !

ಬೇರೆತನದ ಗೋರಿಯೋ,
ಇದೇನೆ ಬಾಳ ದಾರಿಯೋ,
ಮರದೊಳಿಲ್ಲೊ ಅರಗಿದಂಥ ಅಗ್ನಿಸಾರವೋ,
ಮೊಗ್ಗೆಯಲ್ಲಿ ಮಲಗಿದಂಥ ಗಂಧಭಾರವೊ !

ತಡೆಯಲಾರೆ–ಸಾಕು ಬಿಡು ;
ಓ ಕತ್ತಲೆ, ತೊಡೆಯ ಕೊಡು ;
ಕಟ್ಟೊಲುಮೆಯ ತೊಟ್ಟಿಲಲ್ಲಿ
ಕಟ್ಟಾಡಿಸಿ ತೂಗು;
ತೊಡೆದು ಬಿಡು ; ತೊಡೆದು ಬಿಡು
ಮಿಂಚಿನ ನೆನಪ ;

ಹೀರಿ ಬಿಡು, ಹೀರಿ ಬಿಡು
ಒಲವಿನ ಆನುಪ !

ಹಾದರಕೇ ಹುಟ್ಟಿದಂಥ ಮಗುವದು,
ಏನು ವಿಕಟ, ಎಂಥ ವಿಕೃತ ನಗುವದು ;
ನಮ್ಮ ನಲವನುಣಲು ಬಂದ ಹಗೆಯದು !
ಹೂಳು, ಹೂಳು, ಹೂಳು !
ಬಚ್ಚಲಾಳದಲ್ಲಿ ಕುಣಿ
ಅಲ್ಲಿ ಅದನು ಹುಗಿದು ಬಿಡು,
ಮೇಲೆ ನಾನುತನದ ಮುದ್ರೆ
ಭದ್ರವಾಗಿ ಒತ್ತಿಬಿಡು ;
ನಲವಿಗೊಂದೆ ಮೈ ಕೊಡು :

ಬಳಿಯ ಹೆಣ್ಣ ಮೊಲೆ ತುಟಿ ಮೈ
ದಿಂಡು ತೊಡೆಯು–ಸೈ, ಸೈ, ಸೈ, !
ಥೈ, ಥೈ, ಥೈ–ತಕ ಥೈ ಥೈ....
ನಡೆಯಲಿನ್ನು ನಾಟ್ಯ ಕಾಳ ಕತ್ತಲಲ್ಲೇ,
ನಾಲ್ಕು ಗೋಡೆ ನಡುವಣ ಕಿರುಕೋಣೆಯಲ್ಲೇ.

ಕೊಲ್ಲುವಾಟ (ಬಂದಳಿಕೆ !)–
ಅದೇ ಬೆಳೆಯು, ಅದೆ ಗಳಿಕೆ !
ಕೊಂಚ ನಯ, ಕೊಂಚ ನುಣುಪು,
ಏನೋ ಭಯ, ಕೊಂಚ ದಯ,
ಕಾಡು ಪಶುವ ಬಿಸವಂದ,
ನಾಡಿನೊಡೆಯ ನರ ಬಂಡ !

ಕೊಲ್ಲುವಾಟ ಮುಗಿದ ಮೇಲೆ
ಬಾಳಿನ ನೊರೆ ರಾಸಲೀಲೆ :

ಚೆಲುವೊಲವೋ, ನಲವೊ ನಲಿವೊ
ನಯಜೇಡದ ಭಯಜಾಲವೊ
ಕವಿಋಷಿಗಳ ರಸವು ಜಸವು
ದಿನದಿನಕೂ ಹೊಸವು ಹೊಸವು.
ಕೊಲೆಬಿದ್ದಿಗೆ ಬಾಯ್ಕಟ್ಟಲು
ನಡುವೆ ಬೇಕು ನಂಜಿಕೊಳಲು
ಈ ಸಂಸ್ಕೃತಿಲೀಲೆಯು ;
ನೆತ್ತರ ಕಡಲಲ್ಲು ಬೇಕು
ಜೀವರಸದ ಗಣಿಗಳು,
ಕೊರಳ ರುಂಡಮಾಲೆಯಲ್ಲು
ಕಂಬನಿಗಳ ಮಣಿಗಳು.

ನೆಲವು ಬೆಂಕಿ ನೀರು ಗಾಳಿ
ಮನೆಯ ತೊತ್ತುಗೆಲಸಕೆ ;
ಗಂಧವನ್ನು ಬಳಿದುದಾಯ್ತು
ಒಳಗಿನೆಲ್ಲ ಹೊಲಸಿಗೆ–
ಇದೇ ದಿವ್ಯ ಜೀವನ,
ಆತ್ಮರಸದ ದೋಹನ !

ನರಿಯು, ನಾಯಿ, ಹುಲಿ, ತೋಳ
ಕೆಲವು ಹೊತ್ತು ಆಸತ್ತು
ಬಯಲ ಬಿಟ್ಟು ಮುಸುಕ ತೊಟ್ಟು
ಗವಿಯೊಳವಿತುಕೊಂಡುವು ;

ಹಸುವು, ಹುಲ್ಲೆ, ಚಿಗರೆ, ಕಡವೆ,
ಕಲಕೋಕಿಲ, ಗೊರವಂಕ,
ಗಿಳಿ ಅಳಿಗಳು ನಿಶ್ಶಂಕೆ
ನಂದನದಲಿ ಒಂದೆ ನಿಮಿಷ

ಬಿಟ್ಟು ಎಲ್ಲ ತಳ್ಳಂಕ
ಆಡುವಂತೆ ಕಂಡುವು–
ಆರಿದಂತೆ ತೋರುವಂಥ ಅಗ್ನಿ ಗಿರಿಯ ಮುಖದಲಿ,
ಬೆಳಕೆ ಪಟ್ಟವೇರಿತೇನೊ ಎನ್ನುವಂಥ ಸುಖದಲಿ !

ಮರುನಿಮಿಷವೆ ಬಂತು, ಪಾಪ !
ಭೂಕಂಪದ ಅಪಲಾಪ,
ಅಗ್ನಿಮುಖಿಯ ವಿಪ್ರಲಾಪ ;
ಕತ್ತಲೆಂಬ ಪ್ರಳಯಕಾಲವಾರಿನಿಧಿಯ ನಾಲಗೆ
ಕಿತ್ತು ಬಿಸುಟಿತಲ್ಲ, ನೋಡು, ಬೆಳಕಿನೆಲ್ಲ ಪೀಳಿಗೆ.

ಒಂದೊ ಎರಡೊ ಮರಿಗಳು
ತಪ್ಪಿ ಜಾರಿ ಜಗುಳಲು
ನೋನುತಿರುವ ನೋಹನೆಂಬ ಗಾಂಧಿಯೆಂಬ ದುರ್ಗಕೆ,
ಅಲ್ಲಿ ತಪೋಮಾರ್ಗಕೆ––
ನಡೆಯಲಿನ್ನು ನಾಟ್ಯ ಕಾಳಕತ್ತಲಲ್ಲೇ,
ನಾಲ್ಕುಗೋಡೆ ನಡುವಣ ಕಿರುಕೋಣೆಯಲ್ಲೇ !

ಗಾಂಧಿ, ಗಾಂಧಿ, ಗಾಂಧಿ !
ಮರೆವುದೆಂತು ಹೇಳು, ಒಳಗೆ
ಹೂತ ಮಗುವನು ;
ತೊಡೆವುದೆಂತು ಆ ಅಪೂರ್ವ
ನೋವು ನಗುವನು ?

ಅತ್ತಲಿತ್ತಲೆತ್ತಲೂ
ಮಿಂಚು ಗೊಂಚಲೆರಚಲು ;
ಕೃತಿಕೃತಿತಳಪಾಯ ಬಾಯ
ತೆರೆಯೆ ಮಿಂಚು ಹೊಂಚಲು ;

ಈ ಮಿಂಚಿಗೆ ಬೇರೆ ಏನು ಕೆಲಸ ಬೇಡವೆ ?
ಎದೆಯಂಚಿಗೆ ಉರಿಯನೆರಚಿ ನೋಡುವಾಟವೇ ?
ಕತ್ತಲನ್ನು ಕೆಣಕಲೇಕೆ ?
ಇಲ್ಲದ ಭಯ ತಿಣುಕಲೇಕೆ ?
ಆದರ ಪಾಡ ನೋಡೆವೆ ?

ಪರದೇಶಿಯ ಹಾಗೆ ಬಂದು ತೊಳಲುತಿರುವ ಪಾತಕಿ,
ನಮ್ಮ ಸೊಗವ ಕೊಲ್ಲ ಬಗೆವ ಕಳ್ಳನಗೆಯ ಘಾತಕಿ !
ಕತ್ತಲ ಹೊಟ್ಟೆಯೊಳಲ್ಲವೆ ಆದರ ಹುಟ್ಟು–ಸಾವು ?
ಅದನು ಬಿಟ್ಟರಿದಕೆಲ್ಲಿದೆ ಇಲ್ಲಿ ಬೇರೆ ಠಾವು ?

ಏಳುಸುತ್ತು ಕೋಟೆಯೊಳಗೆ
ಒಳಗೆ ರಂಗಮಹಲಿನೊಳಗೆ
ಸ್ಪರ್ಶ, ರೂಪ, ರಸ, ಗಂಧ !
ನೀರಿಳಿಯದೆ ಬಾಯಿಂದ ?
ಆನಂದ, ಆನಂದ !

ಅದು ಅಹ ಕತ್ತಲ ಕಂದ ;
ಎದೆಗವಚಿಕೊ, ಮುತ್ತುಕೊಡು,
ನಿನ್ನನದಕೆ ತೆತ್ತು ಬಿಡು ;
ಕೊಲ್ಲು, ಕೊಲ್ಲು–ಹಗೆ ಬಂದ !
ಗಾಂಧಿ–ಗಾಂಧಿ ಅದೊ ನಿಂದ !

ಮರುಧರೆ, ಕುದಿಕುದಿವ ಮರಳು ;
ತಿವಿಯುತಲಿದೆ ಬಿಸಿಲ ಸರಳು–
' ಓಯಸಿಸ್ಸೋ, ಓಯಸಿಸ್ಸು !
(ಅಹಾ ಸರಸ್ಸು, ರಸಸದಸ್ಸು !)

ಅಲ್ಲೆ, ಅಲ್ಲೆ–ಓ ಅಲ್ಲೇ–
ಆ ದಿಗಂತದತಿ ಸಮೀಪ
ಹೊಸ ನೀರಿನ ರಸಾಲಾಪ;
ನಡೆ, ನಡೆ, ನಡೆ ಅಣ್ಣ
ನಂಬು ನಿನ್ನ ಕಣ್ಣ.

ಎಲ್ಲಿ, ಎಲ್ಲಿ, ಎಲ್ಲಿ ?
ಎಲೆ ಮರುಳೆ, ಮರಳೆ ಮರುಳು !
ಹತ್ತಿರಲ್ಲಿ, ದೂರದಲ್ಲಿ
ಆ ದಿಗಂತರೇಖೆಯಲ್ಲಿ
ಸುತ್ತಲೂ ಅಪಾರದಲ್ಲಿ
ಎಲ್ಲಿದೆ ಆ ಓಯಸಿಸ್ಸು,
ಆ ಬಾಳ್ನೆಲ, ಆ ಸರಸ್ಸು ?

ಕಂಡು ಕೂಡ ಕಾಣದಂತೆ
ಕರಗಿತಲ್ಲ, ಅಳಗಿತು ;
ಮನಕೆ ತಂಪು ತಟ್ಟಿ ಕೂಡ
ಮುಟ್ಟದೆ ಮೈಗೆರೆಯಿತು.

ಆ ಅನಂತಮನದ ಗೊರಸು
ಗೀರಿದಂತೆ ತೋರಿತಲ್ಲ,
ದೇವನದಿಯ ನಲ್ಮೆನೆಳಲು
ನಾಟಿದಂತೆ ತೋರಿತಲ್ಲ,
ಮಂದಾರದ ಗಂಧಗೀತ
ಸ್ಪಂದಿಸಿದೊಲು ತೋರಿತಲ್ಲ,
ಆಲದೆಲೆಯ ಜೀವಶಿಶುವೆ
ತೇಂಕಿದಂತೆ ತೋರಿತಲ್ಲ !

ಎಲಾ ಇದೇನು, ಎಂಥ ಕನಸು !
ಕನಸೊ, ನನಸೊ ? ಎಂಥ ಮರಸು !
ಅಯ್ಯೊ, ಅಯ್ಯೊ ; ಎಲ್ಲರಸಲಿ–
ಯಾವ ಮರಳ ಭಾರದಲ್ಲಿ ?
ಯಾವ ದಿಗ್ದ್ವಾರದಲ್ಲಿ ?
ಯಾವ ರವಿವಿಹಾರದಲ್ಲಿ ?
ಯಾವ ಶರಧಿತೀರದಲ್ಲಿ ?
ಸೋತೆನಯ್ಯ, ಸೋತೆನು !

ಓ, ಓ, ಓ ಮರುಭೂಮಿಯೆ,
ನಮ್ಮ ತಾಯಿ ಭೂದೇವಿಯ,
ನೀನೆ ಶರಣು, ಶರಣು ;
ಶುಷ್ಕ ಶೂನ್ಯ ಶಠಣು !
ಇಲ್ಲಿ ನಿನ್ನ ತೊಡೆಯ ಮೇಲೆ
ನಾನು ಸತತ ಬಂದಿ ;
ಅಲ್ಲಿ ಕುಳಿತು ಕನವರಿಸುವೆ :
' ಗಾಂಧಿ, ಗಾಂಧಿ, ಗಾಂಧಿ ! '

# ಘಣಿ

ಅಳುಕುವೆನು ನಾನು ನನ್ನೊಳಬಾಳಿನೆಳದನಿಗೆ,
ಪಿಸುಮಾತಿನುರವಣೆಯ ಘಣೆಗೆ ;
ಊದುವೆನು ಪುಂಗಿಯನು ದಿನವು ದಿನವು,
ಮರೆತು ಮಲಗಲಿ ಎಂದು ನನ್ನ ಘಣಿಯು.

ಕಾಳಕಾಳಿಂದಿತಳದರ್ಭಕನ ನಿಬ್ಬೆರಗು
ಹೆಡೆಯಾಟ ನೋಡುವುದಕೆನಿತೊ ಚಂದ !
ಮುಟ್ಟಿ ಮೈದಡವಿ ಮುದ್ದಾಡುವಾಸೆಗೆ ಭಾಷೆ
ಮೈಮರೆತು ಜಿನುಗುವುದು ರಸಮರಂದ.

ಹತ್ತಿರಕೆ ಸಾರಿ ಹೆಡೆಮಣೆಯ ಹಿಡಿದಾಡುವೆನೊ,
ಕೋಲ್ಮಿಂಚುನಾಲಗೆಗೆ ತುಟಿಯಿಡುವೆನೋ,-
ಬೇಡ ಬೇಡೋ ಎಂದು ತರ್ಜನಿಯನೆತ್ತುತಿದೆ
ಭವಭವದ ಅನುಭವದ ಭೂತಗಂಧ.

ಮುಟ್ಟಬೇಕೋ ಮುಟ್ಟಿ ಮೈದಟ್ಟಿ ಗುಟ್ಟುಗಳ
ರಟ್ಟುಗೊಳಿಸಲು ಬೇಕೊ, ಇಲ್ಲದಿರಲು
ನಿಂತು ದೂರದಿ ಭಯಭ್ರಾಂತ ಸಂತೋಷದಲಿ
ಹುಟ್ಟುಗಳನೆಷ್ಟನೋ ಕಳೆಯಬೇಕೋ !

# ಭೂಮಿತಾಯಿ

ಓ ತಾಯೆ, ಭೂಮಿತಾಯೆ,
ನೂರು ಮೊಗದ ನೂರಾರು ಸೊಗದ ಚೆಲುವಿನೊಡಲ ಕಡಲ
ದಿವ್ಯಭವ್ಯಕಾಯೇ,
ಉರಿದು ಆರಿ, ಆರಿ ಕೂಡಾ ಆರದಂಥ ನೋವಿನಿಂದ
ನವೆವ ನಿಸ್ಸಹಾಯೆ,
ಇಲ್ಲಿ ನಲವು, ಅಲ್ಲಿ ನೋವು, ಅಲ್ಲಿ ಹುಟ್ಟು, ಇಲ್ಲಿ ಸಾವು–
ಮೃದುಕಠೋರಗೇಯೆ.

ಬಂದನಿಗೋ ನಿನ್ನ ಕಂದ,
ಮರೆತು ಹೋದ ಪಾಪಿ ಅಂಧ–
ಎಡಹುತ, ತಡಹುತ, ತುಡಿಯುತ
ನಿನ್ನ ತೊಡೆಯನರಸುತ ;
ಬಂದನಿಗೋ ಕರಕರಗುತ ;
ಓಗೊಡು, ಓ ತಾಯೆ, ಸಹಸ್ರಾರು ಕಂಠದಿಂದ ;
ಏಳು, ಎದ್ದೇಳು ;
ಬರಸೆಳೆದುಕೊ, ಅಪ್ಪಿಕೊ ;
ದಿಕ್ಕುದಿಕ್ಕಿನಿಂದ
ಚಾಚು ನಿನ್ನ ಕೈಯ,
ಬಾಚು ನನ್ನ ಮೈಯ ;
ಬೆಂಕಿ ನೆಕ್ಕುವಂತೆ ನೆಯ್ಯ
ನೆಕ್ಕು ನನ್ನ ಮೈಯ.

ಓ ತಾಯೆ, ಭೂಮಿ ತಾಯೆ !
ದೆಯ್ಯ ಭೂತ ಗುಮ್ಮಯ್ಯ—

ಕತ್ತಲಾಳದಿಂದಲೆದ್ದು ಬೆದರಿಸುತಿವೆ ದಮ್ಮಯ್ಯ !
ನಿನ್ನ ಹುಟ್ಟುಹೊಲದಿ ಮತ್ತೆ
ಹುಗಿದ ಗುಟ್ಟಿನಂತೆ
ಇಟ್ಟು ತಟ್ಟು ನನ್ನ ;
ಕೊಟ್ಟ ಭಾಷೆ, ಇಟ್ಟ ವೇಷ ಕಳಚು, ಕಳಚು ಅಮ್ಮ ;
ಸಾಕು ಬಿಸಿದು ಸೋಂಕು
ಎದೆಯೊಳಿಟ್ಟವುಂಕು.

ಹರಿವ ಹೊಳೆಯು, ಮೊರೆವ ಕಡಲು
ಹಾಡುತಿರಲಿ ಲಾಲಿ–
ಮೇಲೆ ಹಸುರು ಹುಟ್ಟಿ ಬೆಳೆದು
ದಿವ್ಯಗಂಧಶಾಲಿ ;
ಮೆಲಿತು ಎಲರು ಬಿಸಿದು ಗಾಳಿ ಅಲರ ಕಂಪು ಧೂಳಿ ;
ಕಾಡರೋಮಮರ್ಮರ
ಹಾಕುತಿರಲಿ ಚಾಮರ ;
ಸುರಿಯಲಮ್ಮ ನಿನ್ನ ಮೊಲೆಯ ಕುಂಭಮೇಘದಿಂದ ವಾ-
ತ್ಸಲ್ಯ ವೃಷ್ಟಿಧಾರೆ ;
ಅದರೊಳರಗಿ ಅರಿವು, ಮರೆವು ತುರುಗಿ ಮಲಗಿಯೇನು ಕಂದ,
ಜೀವನಾಧಾರೆ !

ಮುಗಿಲು ಬಾಗಿ ಕರೆಯುತಿರಲಿ ಆಚೆ,
ಕಡಲು ಕೂಗಿ ಮೊರೆದು ಕೈಯ ಚಾಚಿ
ಕಾಮನಂಬನಾಲಂಬಿಸಿ ಹಂಬಲುಗಳ ತೊಂಗಲು
ಬಂದು ಅಂಗಲಾಚಿ,–
ಆಳಿಗಿಳಿಗಳು ಸೊಲ್ಲವು, ಹೂವು ಹಣ್ಣು ಸಲ್ಲವು ;
ಬೀಜದಲ್ಲಿ ಮಲಗಿದಶ್ವತ್ಥವೃಕ್ಷದಂತೆ
ತಾಯೆ ನಾನು ನಿನ್ನಲಿ.

ನೀನೆ ಅಲ್ಲವೇನು ನನ್ನ ಆವಿಗೆ ?
ಮುದುಡಿ ಮಲಗ ಬಂದೆ ನೋಡು ಅಲ್ಲಿ ನಿನ್ನ ಕಾವಿಗೆ.
ನಡೆದಾಡುವ ಭಾಂಡವಾಗಿ ಬಾರೆನಿನ್ನು ಬಾರೆ ;
ಸಾಕು ಸಂಚಾರವು, ಅರೆ ಬೆಳಕು ವಿಹಾರವು ;
ನಿನ್ನುದಾರ ಉದರದಂಧಕಾರದಾಧಾಳಕೆ
ಸೂಜಿಗಲ್ಲಿಗೋಡಿಬರುವ
ಅಯದ ರೇಣು ರೇಣು–
ಅಂತೆ ಬಂದೆ ನಾನು !

ಎರಚಿದರೇ ಮಂಕುಬೂದಿ, ಮುಚ್ಚಿತೇನು ಕಣ್ಣು ?
ಒಳಗೆಲ್ಲೋ ಕೆಂಡಜೀವ ಮುಗ್ಗುತಿರುವುದೇನು ?
ತೆರೆದು ಕಣ್ಣ ಕೆಂಡವನ್ನೆ ಕೆರಳಿಪಂಥ ಧೀರ
ಬರುವ ಕಾಲ ಕಾದು ಕಾದು ನೋನುತಿರುವೆಯೇನು !

ನೀನು ಕೂಡ ನನ್ನ ಹಾಗೆ ಯಾರ ಪಗಡೆದಾಳ ?
ನಿನ್ನ ಮಕ್ಕಳೆಲ್ಲ ನಿನಗೆ ಬರಿಯ ಶೋಕಮೇಳ ?
ಯಾವ ಕವಿಯ ಮನದ ಮಿಂಚಿಸುಲ್ಲೋಲದ ಮೇಲೆ
ಈ ದುರಂತ ಲೀಲೆ ?
ಕಡಲಿನಲ್ಲಿ ಮೊರೆವೆಯೇನು ?
ಬಿರುವೆಲರಲಿ ಸುಯ್ವೆಯೇನು ?
ಹಸುರುತೆಂಗುಗೈಯನೆತ್ತಿ ದಿನದಿನವೂ ಮೊರೆವೆಯೇನು ?—
ಮುಗಿಲ ಸೊಗದ ಕನಸು ಇಳಿಯದಂಥ ಬಂಜೆ ಬಾಳಿಗೆ ?
ಸಡಲಿ ಬಿತ್ತೆ, ಬೀಳುತಿಹುದೆ, ನಭವ ತಬ್ಬಲೆಂದು ಮೇಲಕೆದ್ದ
ನಿನ್ನ ಬಾಹು ?

ಬರಿಯ ಬೇನೆಯಾಯಿತೇನು ನಿನ್ನ ಬಸಿರ ನೋವು ?
ಆಗ ಈಗ ಹೇಗೊ ತಾಗಿ ಬಡಲು ನಭದ ವಾಣಿ
ಅದನು ಮುಟ್ಟಲೆಂದು ಮೊಳೆವ ನಿನ್ನ ಒಲವಿನೇಣಿ

ಏರುವಂತೆ ಏರಿ ಬಹರು ಬುದ್ಧಕ್ರಿಸ್ತಗಾಂಧಿ–
ಮತ್ತೆ ಬರಿದು ಮತ್ತೆ ಬಂಜೆ ನಿನ್ನ ಬಾಳ ಹಾದಿ.

ಇಲ್ಲಿ ನಿನ್ನ ಬಸಿರಿನಲ್ಲಿ ನಿಲ್ಲುವೆಲ್ಲ ಕುಡಿಗಳೂ
ಅಂಥ ಪುರುಷರತ್ನ ಕಲ್ಪತರುವಾಗುವ ತನಕವೂ
ತಪ್ಪದಮ್ಮ ಬೇಗೆ ನಿನ್ನ, ನಭದ ಕನಸು ಫಲಿಸದು.
ನಿನ್ನ ಬಯಕೆ ಏಣಿ ಮುಗಿಲ ಮುಟ್ಟಿ ಗಟ್ಟಿ ನೆಲಸದು.

ಏಳಲಾರೆ ಅಲ್ಲಿವರೆಗೆ ನಿನ್ನ ಬಸಿರಿನಿಂದ,
ಕನಸಿನಂತೆ, ಊಹೆಯಂತೆ ಮಲಗ ಬಂದೆ ಕಂದ.

ಓ ತಾಯೆ, ಭೂಮಿತಾಯೆ,
ದುಃಖಮಯಿ, ದುಃಖದಾಯೆ,
ನಿನ್ನ ದುಃಖಸಾಗರದಲಿ ನನ್ನ ದುಃಖಬಿಂದು
ಅರಗುವಂತೆ ಕರಗುವಂತೆ
ಚಾಚು ನಿನ್ನ ಕೈಯ,
ಬಾಚು ನನ್ನ ಮೈಯ,
ಬೆಂಕಿ ನೆಕ್ಕುವಂತೆ ಸೆಯ್ಯ
ನೆಕ್ಕು ನನ್ನ ಮೈಯ್ಯ.

ಓ ತಾಯೆ, ಭೂಮಿತಾಯೆ !

# ಹೆಣ್ಣು : ೧

ಇಹರು ಹೆಗ್ಗಡಲ ತಳಕೂ ಮುಳುಗಿ ಬಂದವರು,
ಪಾತಾಳದಾಳಕೂ ಇಳಿದ ಭಟರು;
ಹೆಣ್ಣು, ಈ ಬರಿ ಹೆಣ್ಣು ಎದೆಗಡಲ ಪೇರಾಳ
ಕಂಡ ಕಲಿಗಳು ಮಾತ್ರ ಕಂಡರಿಲ್ಲ.

ಕಿರುದೆರೆಯ ಸರಸ, ಜಲಕಣಗಣದ ಕಲಕು ನಗೆ,
ಕೆಳಬಂಡೆ ಸುಳಿಯ ಪೊಂಪುಳಿಯ ಹೂಟ;
ಬಿಗಿಹಿಡಿದ ನಗೆಸೂರೆಯ ಒಯ್ಯಾರ; ತುಯ್ಯುವೆದೆ
ಹಡಗು ಹಡಗನು ಕರೆವ ಕೊಂಕು ನೋಟ.

ಆಗ ತಂಗಾಳಿ ಜೋಕಾಲಿ; ಮರ್ಮರ ಲಾಲಿ;
ತುಂತುರಿನ ತೆರೆಮುರಿಯ ಬೆರಳಿನಾಟ;
ತಿಳಿನೀಲಿ ರೇಸಿಮೆಯ ಸೆರಗೆತ್ತಿ ಇಳಿಬಿಡುವ,
ಉಬ್ಬಿ ತಗ್ಗುವ, ತಬ್ಬಿ ಬರುವ ಬೇಟ.

ಬಳಿಕ ಬಲ್ದೆರೆ ಮೊರೆಯ ರೋಷ ಭೀಷಣ ಘೋಷ;
ಹುಬ್ಬುಗಂಟನು ಬಿಗಿವ ಮಾರಿನೋಟ;
ಕೆಳಬಂಡೆ ಸುಳಿ ಸೆಳವು ಎಲ್ಲ ಹೆಬ್ಬುಲಿ ಬಾಯಿ,
ಹಡಗು ಬುಗುರಿಗೆ ದಾರ ಬಿಗಿಯುವಾಟ.

ಆಗ ಬಿರುಗಾಳಿ ಗಣೆಮಿಣೆಯಾಟ; ಬುರುಗುನೊರೆ
ಕುದಿವ, ಊದುವ, ಮಿದಿವ ಕಾಲಕೂಟ;
ನೀಲ್ದನಿಯ, ಸುಯ್ದನಿಯ, ಹೊಯ್ದರೆಯ ದೆಯ್ಯಮೈ,
ವಜ್ರಬಂಧದಿ ಕತ್ತು ಕಿವುಚುವಾಟ.

ನೂರು ಹೆಗ್ಗುರಿಗಳನು ಹುಗಿದ ಹೆಗ್ಗೋರಿ ಇದು,
ಹೆಣ್ಣು ಜೀವದ ಆಧಿ, ಸಾವಿನಾದಿ ;
ಇಲ್ಲಿ ಈ ಹಡಗು ಹಿಡಿದಲೆದು, ಅಲೆಯುತ್ತಲಿರೆ
ಜಲಸಮಾಧಿಯ ಅವಧಿ ನನ್ನ ಪರಿಧಿ. ೨೪

# ಹೆಣ್ಣು : ೨

ಹೊನ್ನ ಪಂಜರ : ಅಲ್ಲಿ ಒಳ ಹೊರಗು ಕಿಂಕಾಪು
ರೇಸಿಮೆಯ ತುಪ್ಪುಳಿನ ಮೆತ್ತೆ ಮೆತ್ತೆ ;
ಚಂದ್ರಿಕೆ, ಚಕೋರ, ಅಪ್ಸರೆ, ಅಮೃತ, ಮಂದಾರ
ಗಂಧ, ಕೋಕಿಲಗಾನ, ಮಂದಾನಿಲ.

ಅಲ್ಲಿ ಬಯಕೆಸಲಾಕೆ ಮೇಲೆ ತೇಲುವ ಹೆಣ್ಣ
ಕಣ್ಣ ಕೊರೆಕರೆ ಮಾಯೆಗನ್ನಡಿಯಲಿ
ತೆರೆತೆರೆವ ಸರಿವ ಹೊಸ ಹೊಸ ಲೋಕಲಾಳಿಯಲಿ
ಇಂದ್ರಜಾಲದ ಮಿಂಚುದಾರಗಳಲಿ

ನನ್ನೆದೆಯ ಎಳೆ ಎಳೆಯು ಹೊಸೆದು ಕಸೆಗೊಳ್ಳುತಿರೆ
ಜೇನುಕ್ಕಿ ಹರಿವ ಹೂರೆಕ್ಕೆ ಚಾಚಿ
ಹಾರಲೊಲ್ಲದ ಹಕ್ಕಿ ಹಾರಗಲಿಸಿತು ನನಗೆ ;
ಏರಿದರೆ ಎಳೆಯುತಿದೆ ತನ್ನ ತಳಕೆ.

ಕಿರಿದು ಇದು ಈ ನನ್ನ ಲೋಕ ಹೊರನೋಟಕ್ಕೆ
ಹೆಜ್ಜೆಯಿಡಲಡಿಗೊಂದು ಹೆಜ್ಜೆಯಂತೆ
ಬಿಚ್ಚುತಿದೆ ಈ ಮಂತ್ರರತ್ನಗಂಬಳಿ ಸುರುಳಿ,
ಸೂಜಿಗಲ್ಲಂಚು ಕರೆದೋಡುತ್ತಿದೆ.

ಋತು ಋತುವಿನಾನಂದ ತಂತ್ರಿಗಳು ಝೇಂಕರಿಪ
ಚಿರಚೈತ್ರವಲ್ಲಕಿಯ ಕಲ್ಲೋಲಕೆ
ಹೆಜ್ಜೆಹೆಜ್ಜೆಗು ಎದ್ದು ನಿಲ್ಲುವ ನಲಿವ ಚೆಲುವ
ಚಪ್ಪರಿಸಲೂ ಸಾಕೆ ನೂರು ಜನ್ಮ ?

ಹೊರಗೆ ಬಿರುಗಾಳಿ ಮಳೆ ದಾಳಿ, ಸಾವಿನ ಹುತ್ತ
ಹುತ್ತ ; ಭಯಕಾಳಾಹಿ ಹೆಡೆಯಾಟವು.
ಅಭಯ ಗಾರುಡರಕ್ಷೆ ಇಲ್ಲಿ ; ಮಲ್ಲಿಗೆ ಜಾಜಿ
ಸಂಪಗೆಯ ಕಂಪೊಗೆವ ಮೋಹ ಬೇಲಿ.

ಹೊರಗೆ ನೀಲಾಕಾಶ, ಮುಗಿಲು, ತೊರೆ, ತೆರೆ, ಕಾನು,
ಹಿಮಗಿರಿಯ ಕಂದರದ ಧವಳಹಾಸ ;
ಕೇಳುವುದು ದೂರತೀರದ ಮರ್ಮರಾಲಾಪ—
ಈ ಪಂಜರಕು ನನಗು ವಜ್ರಲೇಪ ! ೨೮

# ಓ ನನ್ನ ಜನವೇ !

ಓ ಬನ್ನಿ ಜನವೆ, ಕನ್ನಡ ಹೊಲದ ತೆನೆತೆನೆಯ್ವೆ,
ಕೊಡುತಿಹ ಕನ್ನಡದ ಹಾಲ ಕೆನೆಯೇ,
ಬಿರುಗಾಳಿಗೊಗ್ಗೊಡಿ ಬಹ ಮೇಘ ಕಣಕಣವೆ,
ಓ ನನ್ನ ಜನವೆ.

ಬನ್ನಿರೋ ಬನ್ನಿ ಕನ್ನಡನಾಡ ಗಡಿಮೂಲೆ
ಮೂಲೆಯಿಂದ,
ಹಳ್ಳಿ ಪಟ್ಟಣಗಳಿಂದ.
ಸುಗ್ಗಿಗಾಳಿಗೆ ಹಿಗ್ಗಿ ಬೆಳ್ಗೊಡೆಗಳನು ನೆಗ್ಗಿ
ನುಗ್ಗಿ ಬಹ ಬೂರಲದ
ಮಾಲೆಯಂದ ;
ಅಗೆದ ಬಾವಿಗೆ ದಿಕ್ಕುದಿಕ್ಕಿನಿಂದಲು ನೆಗೆದು
ಚಿಮ್ಮಿ ಬಹ ಚಿಲುಮೆಗಳ ಚಳುಕಿನಂದ.

ತೆಂಗು ಕೈಯೆತ್ತಿ ಕರೆಕರೆವ ಪಡುಗಡಲ ಕರೆ
ಮುರಿವ ತೆರೆತೆರೆ ರುಬ್ಬು ಮೊರೆಗಳಿಂದ,
ಮುಂಗಾರು ಕೊಪ್ಪರಿಗೆ ಧುಮುಕಿ ಮಳೆಹನಿ ಒನಕೆ
ಬಡಿದು ಪಳಗದ ಮೊಂಡ ಮಣ್ಣಿನಿಂದ,
ಪರಶುರಾಮನ ಕೃಪಣಭೂಮಿಯಿಂದ ;
ದುಡಿತದೈತ್ಯನ ಬೂಟುಕಾಲಿನಡಿಹುಡಿಯಿಂದ,
ಬಾಡಿದಾಸೆಯ ಬಳ್ಳಿಮಾಡದಿಂದ ;
ಕೈ ಕೆಸರು, ಬಾಯಿಯೂ ಕೆಸರು, ಹೊಗೆಹಬೆ ಉಸುರು–
ಮಡುವುಗಟ್ಟಿದ ಬೆವರುಜವುಗಿನಿಂದ,
ಮೇಲುಬಾಳಿನ ಆಸೆ ಹೊತ್ತು ತನ್ನಿರಿ ಅಣ್ಣ,

ಆಷಾಢದಲಿ ಕೊಳ್ಳಿದೆವ್ವದಂದ,
ಪಡುಕಿನಾರೆಯ ಮಚ್ಚೆಲಗಗಳಿಂದ.

ಮರಮರದ ಮರ್ಮರದ ಗುಡ್ಡದೇರಿನ ಮನೆಯ,
ಅಡಿಕೆಸೋಗೆಯು ಸುಗಿವ. ಮಾವು ಮಾರ್ಮಲೆವ,
ಹಲಸುನೇರಿಳೆನಿಂಬೆ ಕಿತ್ತಳೆಯ ಪೇರಳೆಯ
ಸುತ್ತಭತ್ತದ ಕಾಫಿಮೆಣಸು ಯಾಲಕ್ಕಿಗಳ
ಉಕ್ಕುಬೆಳೆಗಳ ಹಸುರುತೆಕ್ಕೆಯಿಂದ ;
ಕಬ್ಬುನೆಲದೆದೆಹಾಲಿನುಕ್ಕಂದದಿಂದ ;
ಅರೆಗುಟುಕು ಪಡೆವ ಬಡಕರುಗಳಂದ ;
ಜಡಿಯ ಸೋನೆಯ ಚಳಿಯ ಕುಲುಕಿನಿಂದ,
ಮಲೆಜ್ವರದ ಪೈಶಾಚಗಾಣದಿಂದ,
ನೆತ್ತರಡಗಿದ ಬೆಳರುಬಾಳಿನಿಂದ ;
ಹುಲಿ ಆನೆ ಚಿರತೆ ಕಾಡೆಮ್ಮೆಗಳ ಬೀಡಿಂದ,
ಮಲೆನಾಡಿನಿಂದ.

ಕಬ್ಬಿಣದ ಕರಿಮಣ್ಣ ಎದೆಯ ಕದವೊಡೆದೊಗೆದು
ಪಾತಾಳದಲಿ ಪುಟಿವ ನೀರ ಮೊಗೆದು,
ಬಾಳು ಸಾವಿನ ಮೇಲೆ ಕೋಟೆಕೆರಳಿದ ಹಾಗೆ
ಹಸುರು ತಪ್ಪದಿ ಜೀವ ಜೀಕುತಿರುವ,
ದುಡಿತ ಉರಿದಾರಿಯಲಿ ಏದುತಿರುವ,
ಬೆವರ ಹೊಳೆ ತಣಿವುಕರೆ ಮುಟ್ಟದಿರುವ,
ಮಹಲ ಅಂಗಡಿಯ ಗೋದಾಮಹೆಗ್ಗಣವುಂಡು
ಬಿಸುಟಜಳ್ಳಿನ ಚೀಲಚೀಲದಂದ ;
ಸೇಂಗ ಉಳ್ಳಾಗಡ್ಡಿ ಜೋಳಗಳ ಬಣಬೆಗಳ
ಹತ್ತಿ ಮೆದೆಮೆದೆ ಹೊದೆದ ಬೀಡಿನಿಂದ ;
ಕಬ್ಬಿಣದ ಮೈಯ ಬಂಗಾರದದುರೆದೆಯಿಂದ,
ಬಯಲುನಾಡಿಂದ–
ಬನ್ನಿರೋ ಬನ್ನಿ ನನ್ನೆದೆಗೆ ಬನ್ನಿ !

ಬೆಟ್ಟಿದೆರೆತೊರೆ ನಾನು ; ತರಿತರಿವ ಕಗ್ಗಲ್ಲು
ಬಂಡೆಬಂಡೆಗೆ ಧುಮುಕಿ ಬಿದ್ದು ಸಿಗಿದು ;
ಕಗ್ಗವಿಯ ಕತ್ತಲಲಿ ಕೆಟ್ಟು ಮನ್ಮೈಲ ಮರುಗಿ
ಕೊಳ್ಳಗಳ ಕಚಗುಳಿಗೆ ನಕ್ಕು ನೆಗೆದು ;
ಕೆಸರಲ್ಲಿ ಕುಸಿದು ಕುಂಟಿದೆ ; ಕೊಳೆವ ತರಗಲಲಿ
ಉಸಿರು ಕಟ್ಟಿದೆ ಹೊಟ್ಟೆ ಹೊಸೆದು ಬಸಿದು.
ಓ ಅಲ್ಲಿ ಕಾಣುತಿದೆ ಜನದ ಜೀವಸಮುದ್ರ ;
ಅಳಿವೆಬಳಿ ಮರಳಲ್ಲಿ ಇಂಗುತಿಹೆನು ;
ಬನ್ನಿರೋ ಬನ್ನಿ, ತೆರೆತೆರೆಯಾಗಿ ಭೋರ್ಗರೆದು
ನುಗ್ಗಿ ಕೊಚ್ಚಿರಿ ಹೊಯಿಗೆ ಕೊತ್ತಳಗಳ ;
ತಬ್ಬಿಕೊಳ್ಳಿರಿ ನಿಮ್ಮ ಕೂಸ ; ಹಾಡುವೆನಾಗ ;
ಅದ್ರಿಭಾವಕೆ ಈ ಸಮುದ್ರ–ತಾಳ,
ಮಲೆಯ ಬಯಲಿನ ಸಾನುಕೂಲ ಮೇಳ.

ತನ್ನಿರೋ ತನ್ನಿ ನನ್ನೆದೆಗೆ ತನ್ನಿ ;
ತನ್ನಿ ನಿಮ್ಮ ಅಬೋಧ ಭಾವ ಅಂಭೋದಗಳ
ವಿದ್ಯುದಾಸೆಯ ಮುಗ್ಧ ನಾಲಗೆಗಳ,
ಒಳತಳದಿ ಮಲಗಿ ಕಾಯುವ, ನೋಯುವಾಸೆಗಳ
ಮಂದಾರಬೀಜಗಳ, ಕೊಳಗ ಕೊಳಗ.
ಶತಮಾನಗಳು ಕೆತ್ತಿ, ಕಡೆದು ಗುಡಿಕಟ್ಟಿರುವ
ನುಡಿಯ ಗುಮ್ಮಟ, ಶಿಲಾಬಾಲಿಕೆಯರ;
ಋಷಿಮುನಿಗಳೆದೆಯ ಸುಧೆ ನಿಂತು ಗುಳುಗುಳಿಸುತಿಹ
ಕನಸುಗಳ ಒಳತೊರೆಯ ಮರ್ಮರಗಳ ;
ಕಲ್ಲುಮಣ್ಣಲಿ ಹೂತ ಹಾಳು ಹಂಪೆಯ ಮರೆತ
ನವರತ್ನ ಭಂಡಾರ, ಹೊನ್ನ ಗಣಿಯ ;
ಹೆಜ್ಜೆ ಹೆಜ್ಜೆಗೆ ಕುಣಿವ, ಮಣಿವ, ಬದಲುವ ಭಂಗಿ––
ದನಿಯ ಏರಿಳಿತಗಳ, ನಗೆಯ ಬಗೆಯ.

ಓ ಬನ್ನಿ ಜನವೆ, ಕನ್ನಡನಾಡ ಗಡಿಮೂಲೆ
ಮೂಲೆಯಿಂದ,
ಹಳ್ಳಿ ಪಟ್ಟಣಗಳಿಂದ ;
ಮೈಸೂರೊ ಮಂಗಳೂರೋ ಧಾರವಾಡವೋ
ರಾಯಚೂರೋ——ಎಂಟು ದಿಕ್ಕಿನಿಂದ.
ಮುಳುಗಿದೀ ಕನ್ನಡವನೆತ್ತುವೊಮ್ಮ್ರನ ಮಣೆಯ
ಬಿಗಿವ, ಎಳೆಯುವ ಗೆಲುವ ಭಾವದಿಂದ,
ಬನ್ನಿರೋ ಬನ್ನಿ, ನನ್ನೆದೆಗೆ ಬನ್ನಿ ! ೮೩

# ವಿಫಲ

ಇಲ್ಲ, ಇಲ್ಲ--ಏನೊಂದನು ಮಾಡಲಿಲ್ಲ ಇವನು.

ತರಗೆಲೆಗಳು ಅಲೆಯುತಿಹುವು ಗಾಳಿಯಲ್ಲಿ ಅತ್ತ ಇತ್ತ ;
ತೊರೆಯ ಮೇಲೆ ಕಸವು ಕಡ್ಡಿ ಮರದ ತುಂಡು ಕೊಳೆಯು ನೊರೆ
ತೇಲುತಿಹುವು, ತೇಲುತಿಹುವು.
ಬ್ಯಾ, ಬ್ಯಾ, ಬ್ಯಾ ಎಂದು ಕುರಿ
ಹುಲ್ಲುಗಾವಲಲ್ಲಿ ಅಲ್ಲಿ
ಮತ್ತೆ ರೊಪ್ಪದಲ್ಲಿ.
ಬೀದಿನಾಯಿ ಬೀದಿಗುಂಟ
ಆದನು ಇದನು ಮೂಸುತ:
ಎಂಜಲನ್ನ, ಎಂಜಲೆಲೆ,
ಚರಂಡಿಯಲ್ಲಿ ಇಲಿ ಹೆಗ್ಗಣ--
ಹೆಣ್ಣು ನಾಯಿ ಮುಂದೆ ಮುಂದೆ,
ಅದರ ಬೆನ್ನ ಹಿಂದೆ
ಬೌ ವೌ ವೌ ಬಕ್ ವೌ ವೌ-
ಹರಿದ ತೊಗಲು, ಕಿತ್ತ ಕಣ್ಣು
ತರಿದ ತಲೆ, ಮುರಿದ ಕಾಲು ;
ನೆತ್ತರೋ ನೆತ್ತರು--
ಬೀದಿನಾಯಿ ಬೀದಿಯಲ್ಲಿ !

ಕಗ್ಗವಿಯಲಿ ಐದೊ ಆರೊ
ಕಿಂಡಿ ಒಂದು ಬಾಗಿಲು ;
ಅದಕೆ ಒಳಗು ಹೊರಗು ಕೂಡ

ಇತ್ತು ಬೀಗಮುದ್ರೆಯು.
ಕಿಂಡಿಗಿಂಡಿಯಿಂದ ಬೆಳಕು
ಜಿನುಗುತಿತ್ತು ತೊಟಕು, ತೊಟಕು
ಅಂದು ಮೊದಲ ಹಗಲೊಳು.
ಬಳಿಕ ವನಸ್ಪತಿಯ ನೆಳಲು
ಕವಿಯೆ ಸುತ್ತುಮುತ್ತಲೂ
ಬೆಳಕು ತೊದಲ ತೊಡಗಲು:
ಕಿಂಡಿ ಇದೆ, ಇಲ್ಲ ಬೆಳಕು,
ಕದಲಲಿಲ್ಲ ಬಾಗಿಲು,

ಏನೊಂದನು ಏನೊಂದನು ಕಾಣಲಿಲ್ಲ ಇವನು,
ಇಲ್ಲ, ಇಲ್ಲ, ಏನೊಂದನು ಮಾಡಲಿಲ್ಲ ಈತನು.

ಬೆಳಕು ಹರಿಯುತಿರಲು, ಇರಿಯು-
ತಿರಲು ಕತ್ತಲೆದೆಯನು,
ಇತ್ತು ಮರದ ಕೊರಡು ನೆಲದ
ಮೇಲೆ ಬಿದ್ದ ಹೆಣದೊಲು.
ಉರಿದನಲ್ಲಿ ಭಾನು ; ಬಾನು
ಉರಿಯನುಗುಳಿತಾದರೇನು ?
ಕೊರಡು ಕೊರಡೆ ಉಳಿಯಿತು ;
ಏಕೊ ಏನೊ ಎಲ್ಲಿಂದಲೊ
ಬಂತು ಅಂದು ಕೆಂಡದ ಮಳೆ ;
ಕೊರಡಿನ ತುದಿ ಹೊತ್ತಿತು,
ಬೆಳಕಿನ ಗುಡಿ ಎತ್ತಿತು;
ಒಂದೆ ನಿಮಿಷ—ಅಷ್ಟೆ, ಅಷ್ಟೆ !
ಬೆಂಕಿ ಕೂಡ ತಿನ್ನದಂಥ
ಬರಡು ಕೊರಡು—ಪಾಪ—ಅಷ್ಟೆ !

ಉರಿ ಹತ್ತಿಯು ಉರಿಯಲಿಲ್ಲ,
ಬೆಳಕು ಬಂದೂ ಬೆಳಗಲಿಲ್ಲ ;
ಇಲ್ಲ, ಇಲ್ಲ ; ಏನೊಂದನು ಮಾಡಲಿಲ್ಲ ಇವನು.

ಜೈ ಜೈ ಜೈ–ಅಲೆ ಅಲೆ—
ಕಡಲಾಳವು ಮೊರೆದೇಳಲು
ಬಿರುಗಾಳಿಯ ತೊತ್ತಳದೊಳು
ಬಂಡೆ ಬಂಡೆ ಬಡಿ ಬಡಿಯಲು ;
ದೋಣಿ ಪಾತಿ ಹರಿಗೋಲು
ಅಲ್ಲು ಇಲ್ಲು ಎಲ್ಲೆಲ್ಲೂ
ಕಾಣಲಿಲ್ಲ ಈತನು :
ಲಾಠಿಯ ಸುಮವೃಷ್ಟಿಯಲ್ಲಿ
ಗುಂಡಿನ ಗುಂಜಾರವದಲಿ
ಸೆರೆಮನೆಗಳ ರಂಗಮಹಲು–

ಇಲ್ಲ, ಇಲ್ಲ ಅಲ್ಲೆಲ್ಲೂ ಕಾಣಲಿಲ್ಲ ಇವನು ;
ಇಲ್ಲ ಇಲ್ಲ ಏನೊಂದನೂ ಮಾಡಲಿಲ್ಲ ಇವನು.

ಕಗ್ಗವಿಯಲಿ ಕುಳಿತು ರವಿಯ
ಕನಸು ಕಾಣುತಿದ್ದನು ;
ಬಾಳ ಬೇರು ಅಲುಗುತಿರಲು
ಹೂವನರಸುತಿದ್ದನು ;
ಲಗ್ಗೆ ಹತ್ತಿ ಉರಿಯುತಿರಲು
ಮಗ್ಗಿ ಹೇಳುತಿದ್ದನು.

ಹುಟ್ಟಿದುದಕೆ ಹುಟ್ಟಿಸಿದನು ;
ಹೊಟ್ಟೆಗಷ್ಟು ಗಿಟ್ಟಿಸಿದನು ;
ಹಣಕೆ ಕುಣಿಯ ತೋಡಿ ಅಲ್ಲಿ
ತನ್ನತನವ ಮಟ್ಟಿಸಿದನು.
ಇಲ್ಲ, ಇಲ್ಲ, ಏನೊಂದನು ಮಾಡಲಿಲ್ಲ ಇವನು,

ಕಾದ ಕಬ್ಬಿಣದ ರಸ ಕುಡಿದು ಅದನಿಬ್ಬನಿಯ
ಕಣವಾಗಿ ಕುಣಿಸಬಲ್ಲೆ ;
ಸಾಗರವನೇ ಕುಡಿದು ಕಡೆಕಡೆದು ಜೇನ ಹನಿ
ಹನಿಯಾಗಿ ಹಣಿಸಬಲ್ಲೆ-

ಎಲ್ಲವನು ಹೂವಾಗಿ ಕರುವಿಡುವ ರೂವಾರಿ!
ಸುಗ್ಗಿ ಬೆಳುದಿಂಗಳ ಸರೋವರದ ತೀರದಲಿ
ಶೃಂಗಾರ ರಸವುಲಿವ ಕಾಮ ನಾನು ;
ಬೆಪ್ಪುಗಳು ಬಲ್ಲರೇ ಈ ರಸವಿಲಾಸವನು ?
ಬಹುವನೇಕಕೆ ಒಡಿವ ಭೀಮ ನಾನು ;
ಶೋಕ ಮೋಹವ, ವಿರಹಯಾತನೆಯ ಮರೆತವನು ;
ಸಲ್ಲಾಪಗಳ ದಳಗಳನ್ನು ತೆರೆದು,
ಪ್ರಣಯವನು ಹಣಿಸುವುದು ನನ್ನ ಬಿರುದು.

ಅಲ್ಲೊಬ್ಬನಿದ್ದ ಕೀಟ್ಸ್ ; ಇಲ್ಲೊಬ್ಬ ಪುಷ್ಪಕವಿ!
ಕಾವ್ಯಸಾಮ್ರಾಜ್ಯಕೆಲ್ಲ
ಈ ಎರಡು ದಿಗ್ದಂತಿಗಳ ಹೆಗಲೆ ಆಧಾರ,
ಕೀಟ್ಸೊ ಮೃತ ; ಅವನೇನು ಹೊರಲು ಬಲ್ಲ ?
ಎಲ್ಲ ಭಾರವು ಈಗ ನನ್ನ ಮೇಲೇ ಪೂರ್ತಿ,
ಅಂತೆಯೇ ಎಲ್ಲ ಕೀರ್ತಿ.

ನನ್ನ ಕವನಗಳಲ್ಲಿ ನಾನೆ ಲೀನ ;
ಬೆಳಗು ಸಂಜೆಯ ವರೆಗು ನನ್ನ ಕಾವ್ಯದ ತಾನ
ಮಿಡಿಯುವುದು ನನ್ನ ಎದೆ ವೀಣೆಯಲ್ಲಿ.
ಅದರ ಮಹಿಮೆಗೆ ಮೆಚ್ಚಿ ನಾನೆ ತಲೆದೂಗುವೆನು,
ನೀವು ತಲೆಬಾಗುವುದು ಏನು ಹೆಚ್ಚು ?

ಆ ಕೋಮಲತೆಗಣ್ಣ ನಾನೆ ಬಂದಿ ;
ನನ್ನ ಕಾವ್ಯಕೆ ನಾನೆ ಆದೆ ವಂದಿ!

ಉಳಿದೆಲ್ಲರೂ ಇಲ್ಲಿ ದುಷ್ಕವಿಗಳು ;
ಬಿಡುವಿಲ್ಲ ಆ ಕಂತೆಗಳನೋದಲು.
ಓದೆ ನಾಲಗೆಬೇನೆ,
ಕೇಳಿದರೆ ಕಿವಿಶೂಲೆ,
ಅವರ ಹೊಗಳಿಕೆ ಕೇಳೆ
ಎದೆ ಕಾದ ಬಾಣಲೆ !

ಹೂವಿನೊಲು ಮಿದು, ಬೆಣ್ಣೆಯಂತೆ ಹದ, ಅಂಥ ಪದ
ಮಧು ಬಂದು ಹರಿಯಬೇಕು,
ನನ್ನಂತೆ ಬರೆಯಬೇಕು !
ಮೇಲುತೆರೆಗಳ ಮೇಲೆ ರವಿಕಿರಣ ಕುಣಿವಂಥ
ಲಾಸ್ಯವನೆ ಬರೆಯಬೇಕು;
ನನ್ನಂತೆ ಬರೆಯಬೇಕು !

ಗಹನವಿಪಿನದವೊಲು ಅಗಾಧಸಾಗರದವೊಲು
ಉತ್ತುಂಗ ಶಿಖರದಂತಿರುವ ಕಾವ್ಯ
ಕಾವ್ಯವೇ ? ಅದು ಭೂತಸಂತಾನ ; ಅದನಾಚೆ
ನೂಕು ; ಆ ಕವಿಗಳನು ತಳ್ಳು ಹೊರಗೆ ;
ತಲೆಬಾಗು ಪುಷ್ಪಕವಿ ಚರಣ ತಳಕೆ !

.

ಬಂದನಿಗೋ ಪುಷ್ಪಕವಿ.
ಹೇಳಿ ಪರಾಕು :
(ನಾನೆ ಸ್ವಾಮಿ, ಆ ಕವಿ !)
ನನಗೆ ಪರಾಕು !
ಕನ್ನಡಕಿನ್ನೇನು ಬೇಕು !
ಭಾರತಕೂ ಈ ವಿಶ್ವಕು
ಸಕಲ ಚರಾಚರಕೂ

ಇವನೊಬ್ಬನೆ ಸಾಕು–ಎಂದರೆ–
ನಾನೊಬ್ಬನೆ ಸಾಕು.

ಜೈ, ಜೈ, ಜೈ, ಪುಷ್ಪಕವಿ ;
(ನಾನೆ, ಸ್ವಾಮಿ, ಮಹಾಕವಿ ! )
ಎಲ್ಲರೊಂದೆ ಬಾಯಿಯಿಂದ
ಹೊಗಳಿರಿ ನನ್ನ ;
ಬಂದನಿಗೋ ಕವಿಚಕ್ರಿ ;
ಎರಗಿರಿ ಸಾಷ್ಟಾಂಗ ! ೧೦೩

# ನನ್ನ ಅವತಾರ

ರಾಮನ ಬಳಿ ಇದ್ದೆ ನಾನು : ಕಂಡೆ ಕೋದಂಡದೋರ್ದಂಡ ಬಲ
ನನ್ನ ಕಣ್ಣ ಮುಂದೆಯೇ ಮೊಳೆತು ಬೆಳೆದ ರೀತಿಯ.
ನನ್ನ ಹಾಗೆ ಅವನು ಕೂಡ ಉಣ್ಣುತಿದ್ದ, ತಿನ್ನುತಿದ್ದ,
ಚಂದ್ರನನ್ನು ತಾ ಎಂದು ತಾರುಮಾರು ತೊದಲುತಿದ್ದ ;
ಹೀಗೆ ಇರಲು ದೇವತ್ವದ ತರಿಸಲೀಟಿತುದಿಯನೇರಿ ಅವನ ಮನ
ಮುಗಿಲ ಚುಚ್ಚಿ ಮುಂದುವರಿದ ಆ ಮಹಾಪ್ರತೀತಿಯ
ಕಣ್ಣಾರೆ ಕಂಡೆನಯ್ಯ ; ಹೊಗಳಲೆನಲು ಆಡಲಿಲ್ಲ ಈ ನನ್ನ ನಾಲಗೆ.
ಉಳಿದೆ ನಾನು ಆಗಲೂ ಈಗ ಇಲ್ಲಿ ಕೊಳೆವೊಲು.

ಕೃಷ್ಣನೊಡನೆ ಗೋಕುಲದಲಿ ನಾನು ಕೂಡ ಬೆಣ್ಣೆ ಕದ್ದು
ಗೋಪಿಕೆಯರ ಸೆರಗ ಹಿಡಿದು ಕಾಡುತಿದ್ದೆ ನಿತ್ಯವೂ-
ಆದರೊಳೇನೊ ನಾನೆ ಅವನಿಗಿಂತ ಮೇಲು, ಸತ್ಯವು !
ಅವನೊ ಯೋಗರಾಜನಾದ, ದೊಂಬ ಸುರಿದ ನೀರಿನಿಂದ
ಮಾವಿನೋಟೆ ಚಿಗಿಯುವಂತೆ ಚಿಗಿತ ;
ಅಬ್ಬ ಏನಚ್ಚರಿ | ಮುಗಿಲಿಗೊಂದೆ ನೆಗೆತ !
ತಿಳಿಯದ ಮನ ತುಯ್ಯುತಿರೆ, ಇಲ್ಲಿ ಕಾಲು, ಅಲ್ಲಿ ತಲೆ,
ಅದಕೂ ಆಚೆ ನೋಟ ;
ಅಹಾ ಅದೆಂಥ ಆಟ !
ನಾನೊ ಸಣ್ಣ ಕಲ್ಲಿನಂತೆ ಕೆಸರ ನಡುವೆ ಉಸಿರು ಕಟ್ಟಿ
ಪಾಚಿ ಕಟ್ಟಿ ಕಾಯುತಿದ್ದೆ, ಭೋಗರಾಜ, ರೋಗರಾಜ,-ಈಗಿನಂತೆ
ಆಗಲೂ.

ಬುದ್ಧನ ಖಾಸಾ ಶಿಷ್ಯ ಯಾರೆಂಬಿರಿ, ನಾನೆ ನಾನು !
ಬುದ್ಧಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ' ,

ಎಂದು ಒರಲಿ ನಡೆದರಲ್ಲ ಅವರ ಮುಂದಾಳಿ ನಾನು :
ಹುಟ್ಟಿಗಿಂತ ಮುನ್ನವೇ ರಾಜತ್ವವ ಬಿಟ್ಟವನು,
ಬೋಧಿವೃಕ್ಷದಡಿಯೆ ಒಮ್ಮೆ ಮೂಗು ಮುಚ್ಚಿ ನೆಟ್ಟವನು,
ನಾನು ಕೂಡ ಹೆಂಡತಿಮಕ್ಕಳನು ಬಿಟ್ಟುಕೊಟ್ಟವನು,
ಅವನ ಹಾಗೆ–
ಅವನೊ ಬುದ್ಧ ಸಿದ್ಧ ಜಗತ್ಪ್ರಸಿದ್ಧನಾಗಿ ಎದ್ದಿದ್ದ :
ಅವನ ಮುಖದ ಕಾಂತಿಯೇನು, ಉಗುವ ಆ ಪ್ರಶಾಂತಿಯೇನು !
ಕೆಂಡದ ಬಳಿ ಇದ್ದು ಕೂಡ ಈ ಇದ್ದಲು ಇತ್ತು ಹಾಗೆ–
ಆಗ ಈಗಿನಂತೆಯೇ ಹೊತ್ತದೇ ಉರಿಯದೆ.

ಗಾಂಧಿ ಬಂದ. ಅವನ ಹಿಂದೆ ಮೊದಲು ಬಂದ ಭೂಪನು
ನಾನೆ. ಅವನ ಕೊರಳಿಗೇರಿದಂಥ ಮೊದಲ ಹಾರವು
ನನ್ನದೇ. ಖಾದಿಯುಡಿರಿ ಎಂದನೋ ಇಲ್ಲವೋ
ಖಾದಿ ತೊಟ್ಟ ಧೀರ ನಾನು ! ರಾಟೆ ಹಿಡಿದು ನೂತೆನಯ್ಯ,
ಆದರೊಳಿಲ್ಲ ಸಂಶಯ. ಹಾಗು ಹೀಗು ಜೈಲಿಗೂ
ನುಸುಳಿ ಹೋದೆ ನಿಶ್ಚಯ. 'ಗಾಂಧಿಗೆ ಜೈ, ಗಾಂಧಿಗೆ ಜೈ'
ಕೊರಳು ಬಿರಿವ ತನಕವೂ ಕಿರಲಿದೆ ನಾ ಇಷ್ಟು ದಿನ ;
ಈಗ ಹೋದನವನು. ನಾನು ಮಾಡಲೇನೊ, ತಿಳಿಯದು !
ಅವನು ಒಂದು ಸಲವೊ ಏನೊ ಮಾಂಸ ತಿಂದು ಅತ್ತನು ;
ದಿನದಿನವೂ ಅದನೆ ತಿಂದು ಅನುಗಾಲವು ಅಳುವೆ ನಾನು !
ಒಂದು ಸಲವೊ ಏನೊ ಅವನು ಸುಳ್ಳು ಹೇಳಿ ಅಳಲಿದ ;
ನನಗೊ ದಿನಾ ಅದೇ ಕೆಲಸ, ಅದೇ ಅಳಲು ಪ್ರತಿದಿನ.
ಅವನೋ ಮಹಾತ್ಮನಾದ ; ಅರಳಲಿಲ್ಲ ನನ್ನ ಮನ.
ನಾನು ಅವನು ಒಂದೆ ಲೋಹ,
ಕಬ್ಬಿಣ–ಕರಿ–ಕಬ್ಬಿಣ.
ಯಾವ ರಸವು ಸೋಂಕಿತವನ ?
ಯಾವ ಬೆಂಕಿ ತಾಕಿತವನ ?
ಸಾಯುವಾಗ ಎಂಥ ಗಟ್ಟಿ ಚಿನ್ನವಾಗಿ ಸಾಗಿದ !

ನಾನು ಮಾತ್ರ ಆಗ ಹೇಗೊ ಹಾಗೆಯೇ ಈಗಲೂ;
ಆರೆಂದರೆ ಹಿಗ್ಗಲಿಲ್ಲ, ಮೂರೆಂದರೆ ಕುಗ್ಗಲಿಲ್ಲ :
ನಾನಚ್ಯುತ, ನಾ ನಿರ್ಜರ, ನಾನೆ ಅದ್ವಿತೀಯ ;
ಒಂದೆ ರೀತಿ, ಒಂದೆ ನೀತಿ, ಒಂದೆ ಸಮ, ನೆಲಮಟ್ಟ-
ಅರಿತಿರೇನು ನೀವು ನನ್ನ ಹೆಬ್ಬಾಳಿನ ಗುಟ್ಟ ? ೫೩

# ನಾಗರಿಕತೆ

ನಮ್ಮ ನಾಗರಿಕತೆಯ ಕತೆ ಹಿರಿದು, ಬಲು ಹಿರಿದು ;
ಒಡಕು ಮಡಕೆಗೆ ತುಂಬುತಿರುವ ಬಣ್ಣದ ನೀರು,
ನೀರು ಕಣ್ಣಿಗೆ ಸೊಗಸು ; ಅಲ್ಲಿ ಮಳೆಬಿಲ್ಲುಗಳ
ಜಲ್ಲಿ ; ಮಿಂಚಿನ ಬಳ್ಳಿ ಕತ್ತಲೊಡನುಯ್ಯಾಲೆ–
ಯಾಡುತಿದೆ ; ತಳದ ಹಾಲಾಹಲದ ಮೇಲಮೃತ
ಬುರುಗು ; ಓ ಇದೊ ನೋಡು ಮಡಕೆ ಬರಿದೋ ಬರಿದು.
ಕರಗಿ ಕಾರ್ಮುಗಿಲು ಧುಮುಕುತ್ತಲಿದೆ ತೊರೆ ಶಿಖರ–
ದೇರಿಂದ ಕೆಳನಾಡು ಬಾಯ್ದೆರೆದು ಸುಯ್ಯುವೆಡೆ,
ಬಂಡೆಬಂಡೆಯ ಜಾರುಗುಪ್ಪೆಯಲಿ ಕುಪ್ಪಳಿಸಿ
ದಡದಡಕೆ ನಗುನಲವು ಬೆಳೆಕಳೆಯ ಉಲ್ಲಾಸ
ನೀಡುತಿದೆ. ಬಂತಿದೋ ಬಯಲು, ಆ ಅದೆ ಕಡಲು !
ನಡುವೆ ಕುದಿ ಮರಳು ಬಾಯ್ದೆರೆದು ಬುಸುಗುಟ್ಟಿ, ಬರೆ
ಇಳಿಯಿತಹ ಜೀವನಾಧರವೆ ರಸಾತಳಕೆ.
ಸಂಜೆ ತಂಗಾಳಿ ಬಂದಾಡುತಿರೆ ಮೈಯೆಲ್ಲ
ಮುಳ್ಳುಮುಳ್ಳಾಗಿ ಥಳಥಳಿಪ ತಂಗೊಳದ ಬಳಿ
ಕಲಕಲ ನಿನಾದರಸತಂದ್ರಿಯಲಿ ಮೈಮರೆತು
ಪಶ್ಚಿಮಾಂಬರದರುಣ ರಾಗರಥದಲಿ ಕುಳಿತು
ಗಂಧರ್ವಲೋಕ ಕಿನ್ನರಿಯ ನೂಪುರಪುರದ
ಬೀದಿಯಲಿ ಬೀದಿವರಿದಿರೆ ಕನಸು ಕಸದೊಳೂ
ರಸವ ಹಿಳಿದುಂಬೆನೆಂಬನು ನಮ್ಮ ತರುಣ ಕವಿ ;
ನಂಬುವೆವೊ ಆಗೊ ಹಸಿವೆ ದಾರ ಜಗ್ಗುತ್ತಲಿದೆ ;
ಇಳಿಯುತಿದೆ ಕಲ್ಪನೆಯ ಮುಗಿಲಿಂದ ನೆಲದ ಕಡೆ
ಗಾಳಿ ಪಟ. ಮನೆಗೆ ಬಂದೊರಗುವನು ಹುಳುಹಿಡಿದ
ಜಂತಿಯಡಿ ; ಕಮಟು ಚಾಪೆಯ ಮೇಲೆ ಸೊಳ್ಳೆಯುಲಿ !

ವೇದಿಕೆಯ ಮೇಲೆ ವೇದವೂ ಕಾಣದತಿಗೂಢ
ತತ್ವಗಳ ಹೊನ್ನ ಬಲೆ ಬೀಸುವವನು ವಕ್ತಾರ ;
ವೇದಿಕೆಯನಿಳಿದು ರೂಪಾಯಿ ಆಣೆ ಕಾಸುಗಳ
ದಿಗ್ವಿಜಯಕ್ಕೈದುವವನು ; ಒಳಗೆ ಹುಳುಹಿಡಿದಂಥ
ಮರದ ಹೊರತೊಗಟೆ ಹಸುರೋ ಹಸುರು, ನೋಟಕ್ಕೆ
ತಂಪು ಬಲುಸೊಂಪು ; ನೆಗಡಿಯಾದವನೊಬ್ಬ
ಬಚ್ಚಲಿನ ಬಳಿ ಕೂಡ ಕೊತು ತೂಕಡಿಸುತ್ತ
ಕಂಪುಗಳ ಕನಸಿನೇಣಿಯನೇರಿ ಮೇಲೇರಿ
ನಕ್ಷತ್ರಕುಸುಮಗಳ ಬಳಿಯೆ ಮರಿದುಂಬಿಯೋ
ಅರಗಿಳಿಯೊ ಆಗಿ ಆಡಲುಬಹುದು ; ಮಳೆಬಿಲ್ಲಿ-
ನಲ್ಲಿ ತೂಗಾಡುತ್ತ ಗುಡುಗುಸಿಡಿಲಿನ ರಭಸ
ಸುಳ್ಳುಸುಳ್ಳೇ ಎಂದು ಮೈಮರೆತು ಇರಬಹುದು.

ಹುಲಿ ಚಿರತೆ ಪೊದೆಯಲ್ಲಿ ; ಚಿಗರೆಕಡವೆಗಳಾಟ
ಬಯಲಲ್ಲಿ ; ನೀರು ಕುಡಿಯಲು ಬಂದು ತೊರೆಯ ಬಳಿ
ಕೊಳೆವ ಮಾಂಸದ ರಾಶಿ. ಇನ್ನೆಲ್ಲಿಯೂ ಕಾಣ—
ದಂಥ ಹೊಂಬೆಳಕು ಕುಣಿಕುಣಿವ ಹಣತೆಗಳಗೋ
ಮುಂದಿನ ಚರಂಡಿ ಬಳಿ ಆಡುತಿವೆ ; ಬಿರುಗಾಳಿ
ಬೀಸಿ ಬರೆ ಬೆಳಕು ಆರಲು ಕಾಲ ಬೇಕೆಷ್ಟು ?
ಬಳಿಕ ಬರಿ ಹಣತೆಗಳು, ಬರಿ ಮಣ್ಣ ಭಣಿತಗಳು !–
ಆ ಬಳಿಕ ಆರಿಹೋದಂಥ ಬೆಳಕಿನ ಕನಸು
ಆಗಾಗ ಅದರ ಬಣ್ಣನೆ ಕಾವ್ಯ ; ಅದರ
ಚಿಂತನೆ ಯೋಗ ; ಅದು ಇದೆ ಇಲ್ಲಿ ಅದರಲ್ಲಿ
ಇದರಲ್ಲಿ ಎಂಬಾತ್ಮವಂಚನೆಯೆ ಭೋಗ.

ಭೋರ್ಗರೆಯುತಿರೆ ಕಡಲು ಮರೆತದನು ಮರಳಲ್ಲಿ
ಕಟ್ಟಿ ಮನೆಕೋಟೆಗಳ, ನಾಲ್ಕು ನಿಟ್ಟೆಗು ಕೂಡ
ಇಟ್ಟು ಕಾವಲ ನನ್ನ ಮನೆ ಇಲ್ಲಿ ಗೆರೆಯಾಚೆ

ಅದರಾಚೆ ನಿನ್ನ ಮನೆ ಎನ್ನುವುದು ; ಆ ಆಚೆ
ತನ್ನದಾದರೆ ಮೇಲೊ ಏನೊ ಎಂಬಳಿಯಾಸೆ
ಕುದಿಸೆ ನೆತ್ತರ, ಬಿಲ್ಲು ಬಾಣವನೊ ಗುಂಡನೋ
ಬಾಂಬನೋ ಎಚ್ಚು ಹುಚ್ಚಾಡುವುದು ; ಈ ಆಟ
ನೋಟಕ್ಕೆ ಸೊಗಸುವುದು ; ನೆತ್ತರಿನ ಹೊಳೆಯಲ್ಲಿ
ಕೊಚ್ಚಿಹೋದರೆ ತಾಳಿ ಏನು ಮನೆ ಮಠ ಕೋಟೆ ?
ಕಡಲಲ್ಲಿ ಮೊರೆಯುವುದು, ಆ ದಿಗಂತದ ಹುಲುಸು
ಹೊಲದಿ ಬಿರುಗಾಳಿ ಬೀಜಗಳು ಮೊಳೆಮೊಳೆಯುವುವು ;
ಈ ಇಲ್ಲಿ ಸುರಿದ ನೆತ್ತರ ಲೀಲೆ ಕಡಲ ಕೈ
ಒರಸುವುದು ; ಮತ್ತೆ ಮರಳಲಿ ಮನೆಗಳೇಳುವುವು,
ಬೀಳುವುವು ; ನಲವೊಲವು ನಗು ಸರಸ ಪರಿಹಾಸ
ಕಣ್ಣುಮುಚ್ಚಾಲೆಯಾಡುವುವು ; ಮತ್ತೆ ಮೊರೆದೇಳುವುದು
ಹೆಮ್ಮಾರಿಗೌತಣವನಿಕ್ಕಿ ನೆಕ್ಕುವ ಚಪಲ.

ದಿಟವಯ್ಯ, ನಿಜ ಮಾತು ; ನಮ್ಮ ನಾಗರಿಕತೆಯ
ಅಕ್ಷರಾಭ್ಯಾಸ ಉಲ್ಲಾಸಕರ ; ಬರೆದು ಮೊದಲ ಆಕಾರ
ಅದನೆ ಅಳಿಸುವುದು ಮತ್ತದನೆ ಬರೆವುದು ಹೀಗೆ
ನಮ್ಮ ಗತಿ ಪ್ರಗತಿ ; ಮುಂದಕೊಂದಡಿಯಿಟ್ಟು
ಹಿಂದಕೊಂದಡಿಯಿಡುವ ಮನದ ಸಮತೂಕವಿದು.
ಸುತ್ತುಮುತ್ತಲ ಮುಳ್ಳುನೆಲದಿ ಈ ಎಳಗರಿಕೆ
ಎತ್ತಿ ತಲೆಯನು ಗಾಳಿಗೊಲೆವ ಮೊದಲೇ ತುತ್ತು
ಒತ್ತೊತ್ತಿ ಬರುವ ಕತ್ತಿಗೆ ; ಕೋಡುಗಲ್ಲೆರಡು–
ಒಂದನಡರುತ್ತಲಿನ್ನೊಂದನೇ ಕೋರುವುದು ;
ನಡುವೆ ನೀಡಿವ ಮಹಾಕಂದರದ ದೆಯ್ಯಮೈ
ನೋಡುವುದು ; ನೋಡಿ ಹಾಡುವುದು ; ಅದನೆಂತಾರೆ
ಕೂಡಿಸುವೆನೆಂಬಚಿಂತ್ಯದ ಚಿಂತೆ ಚಿತೆಯಲ್ಲಿ
ಉರಿದು ಹೋಗುವ ಗಂಧಹೀನ ಕೊರಡೀ ಬರಡು
ಬಾಳು. ಉಂಟೆ ಹೇಳಿರಿ ನಮ್ಮ ನಾಗರಿಕತೆಗೂ ಮಿಗಿಲು ?

# ಇಂದು ನಮ್ಮ ನಾಡು-೧

ಇಂದು ನಮ್ಮ ನಾಡು ಜಾತ್ರೆ ಗಜಿಬಿಜಿ ಕಳೆದು
ಪಡಖಾನೆಯಲಿ ಪಟ್ಟ ಜನದ ಪಾಡು ;
ಬುಂಡೆ ತುಂಬಿದೆ ಹೆಂಡ ; ಕೆಸರು ತುಂಬಿದೆ ಹೊಂಡ ;
ಕಂದಿ ಕರಕಿದೆ ಉರಿದ ಕೆಂಪು ಕೆಂಡ.

ತೇರ ಹಿಡಿದೆಳೆದ ಕೈ, ಬಾಗಿ ಪೊಡಮಟ್ಟ ಮೈ
ಭಕ್ತಿ ತುಳುಕಾಡಿದ್ದ ಅಂತರಂಗ
ಈಗ ನರಕಕ್ಕೆ ಕೈಮರ, ಕರಡಿಗುಹೆ, ಘೋರ
ರಾಕ್ಷಸತೆ ಭೋರಿಡುವ ನಾಟ್ಯರಂಗ.

ಬೀದಿಬೀದಿಯ ಸುತ್ತಿ ಬಂದ ಹೂವಿನ ತೇರು
ಹೇಮಂತದಶ್ವತ್ಥದಂತೆ ನಿಂತು
ಗುಡಿಯ ಮುಂಗಡೆ ಶೂನ್ಯ ಮನಕೆ ಹೃದಯಕೆ ನೆಟ್ಟ
ಕಂಕಾಲದ ಪತಾಕೆ ಸುಯ್ಯುತಿಹುದು.

ಉತ್ಸವದ ಮೂರ್ತಿ ರಥವಿಳಿದು ದೇವಾಲಯದ
ಮೂಲೆ ಕತ್ತಲಿನಲ್ಲಿ ಮುಗ್ಗುತಿಹುದು ;
ಬಾವಲಿಯ ಹಿಕ್ಕೆಗಾಗಿದೆ ಕುಕ್ಕೆ, ಇನ್ನೆಂದು
ಜಾತ್ರೆ ? ನಿಟ್ಟುಸಿರನ್ನು ಸೂಸುತಿಹುದು.

ಮೂಲವಿಗ್ರಹ ಮಾತ್ರ ಅಚಲ ; ಕಲ್ಲಿನ ಘೋರ
ನೈರಾಶ್ಯವನು ಹಲ್ಲಿ ಲೊಚಗುಟ್ಟಿತು.
ಬಾವಲಿಯ ಕೀಚು ನಿರ್ಮಾಲ್ಯದುರ್ಗಂಧಕ್ಕೆ
ನಾಲಗೆಯನಿತ್ತು ಪಡಿನುಡಿಗೊಟ್ಟಿತು.

ಜಾತ್ರೆ ಬರುವುದು ; ಜಾತ್ರೆ ಕಳೆವುದಕಟಾ ! ತೇರು
ಅರಳುವುದು ಮತ್ತೆ ಬೋಳಾಗುತಿಹುದು ;
ನರರ ಕಂಠದಿ ಬಾನಘಂಟೆ ಬಾರಿಸುತೊಮ್ಮೆ
ಬಳಿಕ ಮಾರಿಯ ಡೋಲು ಬೊಬ್ಬಿಋದು.

ಮೂಲವಿಗ್ರಹವೆ ಉತ್ಸವಮೂರ್ತಿಯಾಗಿ ಹೊರ-
ವಂಟು ರಥದಲಿ ಸದಾ ಸೊಗಸುವನಕ,
ದಿನದಿನವು ಜಾತ್ರೆಯುತ್ಸಾಹ ಮೊರೆಯುವ ತನಕ
ತೊಲಗುವುದೆ ಹೇಳು ಆ ಮೃತ್ಯುಪಥಕ ? ೨೮

# ಇಂದು ನಮ್ಮ ನಾಡು-೨

ಕತ್ತಲಿನ ನರದಲ್ಲಿ ತತ್ತರಿಸಿ ತೊಳಲುತಿದೆ
ಬಳ್ಳುಗಳ ವಿಕರಾಳ ಕೂಗು ;
ತಣ್ಣನೆಯ ಗಾಳಿಕುಣ್ಣಿಯ ಮೂಗುತುದಿ ತಾಗಿ
ಬಿಗಿಯುತಿದೆ, ಸಡೆಯುತಿದೆ ತೊಗಲು.

ಬಾನಿಗಂಟಿದೆ ತೊನ್ನುಮೋಡ ; ಚಿಕ್ಕೆಯ ಬೊಕ್ಕೆ
ರಸಿಗೆ ಬೆಳಕನು ಕಿವುಚಿ ಕಮರುತ್ತಿದೆ.
ನೆಲಚಿತೆಯ ಹಸಿಸೌದೆ ಸೌಧದಲಿ ಹತನರತೆ
ಬೆಂಕಿಸೊಂಕಿಗೆ ಕಾದು ಕೊಳೆಯುತ್ತಿದೆ.

ಮಾನ ಸತ್ತು ಕೊಳೆವ ಮನೆಕೇರಿಗೋರಿಗಳಲ್ಲಿ
ಮುಗ್ಗುವಿಗ್ಗಾಲೊಡಲ ಚೂರುಪಾರು
ಕದವ ಕಿಂಡಿಯು, ಸೂರ ತೂರಿ ಕುಪ್ಪಳಿಸುತಿವೆ
ಬರಿಹೊಟ್ಟೆ ಚಪ್ಪಟೆಬೆಲೂನು ಸಾಲು.

ಸೇರುತಿದೆ ಊರಾಚೆ ಮಸಣಮಾಳಕ್ಕೆ ಹೊಸ
ಹೊಸ ಪರಿಷೆ, ಸೋಜಿಗದ ವೇಷವರಸೆ :
ರುಂಡಮುಂಡಗಳೆಲುಬುಗೂಡು, ಹುಲಿ ನರಿ ತೋಳ
ಭೂತಭೇತಾಳ ಭೈರೂಪನರತೆ.

ಸರಕು ಹೊಸಹೊಸತು ಮಾರುತ್ತಲಿದೆ ; ಕೂಸುಗಳ
ಕಂಕಾಲ, ಕಣ್ಣಗುಡ್ಡೆಗಳ ಗಾಜು ;
ಕರುಳ ಮಾಲೆಯು, ತೊಗಲ ಚೀಲ, ಅಟ್ಟೆಯ ಬುಟ್ಟಿ,
ಹೃತ್ಪಿಂಡ ಚೆಂಡು, ಬೆನ್ನೆಲುಬು ದಾಂಡು.

ತಟ್ಟುತಿದೆ ಮಸಣದಪಹಾಸ ಕೇರಿಗೆ, ಮನೆಗೆ ;
ವಿಜನ ಪಥಪಥ ವಿಕೃತ ಕೇಕೆ, ಕುಣಿತ.
ಕಿರಿದೆಲ್ಲ ಹಲ್ಲ ತಲೆಬುರುಡೆ ಹಾಕಲು ಲಾಗ
ಅಟ್ಟೆ, ಅಡಿಯಿಟ್ಟು ನಡಸಿದೆ ಕವಾತ.

ನಡೆಯುತಿದೆ ರಾತ್ರಿಡಾಕಿನಿಯ ಮೆರವಣಿಗೆ, ಝಣ–
ಝಣಿಸಿ ರೂಪಾಯಿಮಳೆ ಬೀಳುತ್ತಿದೆ.
ಲಕ್ಷೋಪಲಕ್ಷ ಕಿಸೆ ಕಿಸಿದು ನಿಂತರು ಬಾಯಿ
ಗುಂಡೋದರಗೆ ಮಾತ್ರ ದಕ್ಕುತ್ತಿದೆ. ೨೮

# ಇಂದು ನಮ್ಮ ನಾಡು-೩

ಬೇರು ಸತ್ತೀ ಮರವನೆತ್ತಿ ನಿಲ್ಲಿಸು ಮಗೂ,
ಕೊಂಬೆರೆಂಬೆಗಳಿರಲಿ ಇದ್ದ ಹಾಗೆ ;
ಒಣಗಿದೆಲೆಗಳ ತಂದು ಕಾಫಿ ಕಾಯಿಸು, ಕುಡಿ
ತುಂಬಿ ಬರುತಿರೆ ಕಂಠಕಳಲ ಬೇಗೆ.

ತಳಕೆ ಕಟ್ಟೆಯ ಕಟ್ಟಿ ಹಾಕು ನೀರ, ವಿಷಾದ
ತರುಬಿದರೆ ಕುದಿಯೆಸರು ಕಣ್ಣ ನೀರು
ಸುರಿದು ಬೀಳಲಿ ಇಲ್ಲಿ, ಒಳಗೆ ಬೇಯಲಿ ಅಲ್ಲಿ
ಸೈತಾನನಡುಗೆಗೆ ಚಿರೋಟಿ ಖೀರು.

ಬಲ್ಬುಗಳ ತಂದು ಜೋಡಿಸು, ಬೆಳಕಿನುಯ್ಯಾಲೆ
ಮಳೆಬಿಲ್ಲ ತೂಗಿಬಿಡು ಕೊಂಬೆ ಕೊಂಬೆ ;
ಹಚ್ಚು ಕಾಗದದ ಹೂಕುಚ್ಚುಗಳ, ಅತ್ತರನು
ಹಚ್ಚು, ಗುಂಜಾರವದ ಹಾಡುಹಾಲಗೆ.

ನೆರಳಿಲ್ಲ, ಕೊಂಬೆ ಬರಿಪೊಳ್ಳು ಎನ್ನಲು ಸಲ್ಲ,
ನೆರಳು ಬೇಕೇ ಹೊನ್ನ ಹೊದಿಕೆಗಿಂತ ?
ಇದು ಸನಾತನ ವೃಕ್ಷವಣ್ಣ ; ನೇಣಿಗೆ ಬೇಕೆ
ಬೇರೆ ಆಧಾರ ಈ ಕೊಂಬೆಗಿಂತ ?

ಪಡುವಲದ ಗಾಳಿ ಆಡಿದರೆ ತೂಗುವುದಷ್ಟೆ—
ಎಂಥ ಮಾರ್ದನಿ, ಎಂಥ ನಕಲೀ ಕುಣಿತ !
ನೆಲದ ಕೊಳೆನೀರನೊಲ್ಲದು ನಮ್ಮ ದಿವ್ಯತರು,
ಕುಡಿದು ಬೆಳೆವುದು ಸ್ವಪ್ನಲೋಕದಮೃತ !

ಬಾರವೇ ಇಲ್ಲಿಗೊಂದೂ ಹಕ್ಕಿ ?—ಗಿಳಿ ಪುರುಳಿ
ಕೋಗಿಲೆಯುಂ ಗುಬ್ಬಚ್ಚಿ ಕಾಗೆ ಗೂಗೆ ?
ಇರುವ ಕೋಗಿಲೆ ಒಡಿ, ಕೊಲ್ಲು ; ಸತ್ತರೆ ಹುಲ್ಲು
ತುರುಕಿ ಇಡು ಸಾಲಾಗಿ ಕೊಂಬೆಮೇಲೆ !

ಹುಳುಕು ತೊಗಟೆಗೆ ಹೊದೆಸು ಅಪರಂಜಿ ತಗಡ ; ಮೈ
ಮೇಲೆ ಕೆತ್ತಿಸು ಇದರ ಪೂರ್ವ ಕಥೆಯ :
"ಇಲ್ಲಿ ನೆರಳಿತ್ತು ಹಸುರೆಲೆತಳಿರು ಹೂ ಹಣ್ಣು,
ಕೋಗಿಲೆಯ ಸರವಿತ್ತು, ಗಿಳಿಯ ನಿಲಯ !

"ಇಲ್ಲಿ ಮಿಡಿದಿತ್ತು ಕೋದಂಡ, ಮೊಳಗಿತ್ತಿಲ್ಲಿ
ಪಾಂಚಜನ್ಯವು, ಚಕ್ರ ತಿರುಗುತಿತ್ತು ;
ದಂಡವೊ, ಕಮಂಡಲುವೊ, ದರ್ಭಾಸನವೊ, ಪರ್ಣ–
ಶಾಲೆಯೋ ಈ ಇಲ್ಲಿ ಸೊಗಸುತಿತ್ತು"

'ಇತ್ತು' ಗಳ ಧ್ವಜವ ಹಿಡಿದೆತ್ತಿ ನಿಲ್ಲೋ ಮಗೂ,
'ಇದೆ'ಯ ಹೃದಯದ್ರಾವ ಬೇಡ ನಿನಗೆ;
ಮರವುಂಟು, ಮರಕೆ ಬಂಗಾರವುಂಟಲ್ಲದೆಯೆ
ಕಟ್ಟೆಯುಂಟಲ್ಲ ! ನೀರಿಕ್ಕು ಅದಕೆ !

# ಹಿಮಗಿರಿಯ ಕಂದರ

ಹೊಗೆ, ಬೆಂಕಿ,
–ಅಯ್ಯೊ ಹಾಳಾಗ–
ಉರಿ, ಶಖೆ, ತಾಪ ;
ಹೊರಗೆ ರಣರಣ ಬಿಸಿಲು, ಒಳಗೆ ಮಾರಣ ಬೆಂಕಿ.
ಮಲಗಿತ್ತು ಮನ ಚಿತೆಯ ಮೇಲೆ ಆಫೀಸಿನಲಿ.
ಭೂತಗನ್ನಡಿ ಬಿಸಿಲುಮುಚ್ಚು ಚುಚ್ಚಿತು ತಲೆಯ ;
ಮಿದುಳು–ಬಚ್ಚಲ ಹಂಡೆಯಲ್ಲಿ ಬೇಯುವ ಆಮೆ–
ಎದ್ದೆದ್ದು ಬಿದ್ದು ಒದ್ದಾಡುತಿತ್ತು.
ಕಿಟಕಿಯಲಿ ಬೆಂಕಿಹೊಳೆ ಹರಿದು ಕುರ್ಚಿಯ ಮೇಲೆ
ಉರಿಕೆಂಡ ; ಮೇಜು ಅಗ್ನಿಯ ಕುಂಡ ; ಆಚೀಚೆ
ಕುಳಿತು ಕಮರುವ ಕ್ಲಾರ್ಕುಗಳ ಸುತ್ತ ಕೆನ್ನೀಲಿ
ಜೋಲುನಾಲಗೆ ನೆಕ್ಕುತಿತ್ತು ಪಚಪಚ ಪಚ್ಚ !
ಯುಗಯುಗದ ಫೈಲುಫೈಲನು ಹೇರಿದ ಕಪಾಟು
ಕುಸಿದು ಬೆನ್ನೆಲುಬು ಕಿರುಗುಟ್ಟುತಿತ್ತು.
ಖಟ್ಟಖಟ ನಿಟಿನಿಟಿಲ್–
ಬೊಂಬೊ ? ಮೂಳೆಯ ಗಂಟೊ ?
ಮಿಗ ಹಕ್ಕಿ ಹಣ್ಣು ಹೂ ತಳಿರ ತೇಗಿದ ಅಗ್ನಿ
ಖಾಂಡವದಿ ಮುಂದೇನು ಎನ್ನುತಿತ್ತು.
ಕಂಡು ಪುರುಷಾಕೃತಿಯ ಕುರ್ಚಿಯ ಮೇಲೆ

"ಅಯಿ ಜೀವಿತನಾಥ ಜೀವಸಿ ?"
ಕೇಳಿದೆನು ಒಳ ಕುಳಿತ ಸಾಹೇಬನನ್ನು "ಸಾರ್,
ಏನು ಯೋಚನೆ ? ಏಕೆ, ಏಕೆ ಚಿಂತೆ ?
ಆಡಿ, ಮಾತಾಡಿ !"

ಕಾಳಿದಾಸನು ತೇಲಿ ಬಂದು ಹೇಳಿದ ಹೀಗೆ :
"ಹರಕೋಪಾನಲಭಸ್ಮಕೇವಲಂ"

ನಾ ಬಂದ ದಾರಿಯಲಿ
ಮನೆಯ ಹತ್ತಿರದ ಆ ಗಟಾರದಂಚಿನ ಮೇಲೆ
ಮಲಗಿತ್ತು ಹೊಟ್ಟೆ ಮೇಲಾಗಿ ಹಳಸುವ ನಾಯಿ–
ಕತ್ತು ತಣಪಣ, ಕೊಕ್ಕೆ ಕಾಲು, ನಾಲಗೆ ನಿಂತ ಪೆಂಡ್ಯುಲಂ–
ರವಿಕಿರಣ ಬಂದು ಮೈದಡವಿ ಮುದ್ದಿಡುತಿತ್ತು ;
ಪಂಚಾಗ್ನಿ ಮಧ್ಯೆ ನಡೆದಿತ್ತು ತಪ ; ತೂಫಾನು
ತಾಪ ತಡಿಯೊಡೆದು ಮರಮರ ಮುಳುಗಿ ಮೇಲೆಲ್ಲ
ಗುಳುಗುಳಿಸುತಿತ್ತು.

ಆ ಅಗೊ, ಕಂಡೆ ;
ಕಾಗೆ ಕುಕ್ಕಿದ ಕಪ್ಪೆ :
ಹೊಟ್ಟೆಬಿಳಿ ಮೇಲಾಗಿ, ಚಾಚಿ ತಬ್ಬಲಿ ಕಾಲ,
ಮಣ್ಣು ಮೆತ್ತಿದ ಮುಗ್ಧ ಕೈಯ ಆಗಸಕೆತ್ತಿ
ಕಾಯುತಿದೆ. ಒಳಬೆಂಕಿಯೊತ್ತಿ ಶಿಥಿಲಗ್ರಂಥಿ
ಬಿಚ್ಚುತಿದೆ ತಿದಿತುದಿಯ ಕೆಂಡದಂತೆ.

ಮೊನ್ನೆ ಗೋತಾಹೊಡೆದನಲ್ಲ ಆ ಬಡಪಾಯಿ–
ಛತ್ರದ ಚರಂಡಿಬಳಿ ಹರಕುಚಿಂದಿಯ ಕೆಳಗೆ–
"ಹಂಸತೂಲಿಕೆಯ ಹಾಸಿಗೆ, ಗುಲಾಬಿಯ ದಿಂಬು,
ಕರ್ಪೂರಸುಂದರಿಯ ಕೂರ್ಪು, ಮಲ್ಲಿಗೆಕಂಪು,
ಓ ಕನಸಿನಿಂಪು !"
ಮಲಗಿದಾತನ ಬಂದು ಮಾತಾಡಿಸಿತ್ತು ನೊಣ ;
ಕುಶಲ ಕೇಳಿತ್ತು ಕಟ್ಟಿರುವ ಗುಂಪು.

—ಬೆನ್ನಿಗಂಟಿದ ಹೊಟ್ಟೆ, ಹೊಟ್ಟೆಗಂಟಿದ್ದ ತಲೆ ;
ತಲೆಯಲಿ ತಳಾಯಿಸಿತ್ತೊಂದು ತೋಳ.
ನರನರದ ಮೋರಿಯಲಿ ಇಲಿ ಹೆಗ್ಗಣಗಳ ಮೇಳ ;
ಮೃಗಶಾಲೆಗೇಟು ತೆಗೆದಿತ್ತು ಅಗಲ !

"ಅಯ್ಯೊ ಸ್ವಾಮಿ, ಅನಾಥ ! ಕೊಡಿ ಮೂರು ಕಾಸ ;
ಸಾಡಬೇಕು ; ಬಡಪಾಯಿ ! ನೀಡಿ ಧರ್ಮ.
ನನಗೂ ಇವಗೂ ಇತ್ತು ಬಹಳ ಇಸ್ವಾಸ ;
ಏನು ಮಾಡಲಿ ಹೇಳಿ ಅವರವರ ಕರ್ಮ."

ಎಸೆದು ಮೂರೇ ಕಾಸ, ನಡೆದೆ ನಾ, ಬೊಂಬುಗಳ
ಮೇಲೆ ನಡಸುತ್ತ ತುಸು ಜಂಬೂಸವಾರಿ.
ಮಲಗಿ ಕಟ್ಟಿಗೆಮಂಚದಲ್ಲಿ ಮುಚ್ಚಿದೆ ಕಣ್ಣ ;
ಅರಳಿತ್ತು ಕೊರಡುಕೊರಡಲ್ಲು ಕೆಂಚನೆ ಹೂವು ;
ಬಾಚಿ ತೋಳನು ಬೆಂಕಿ ಬಿಗಿಯುತಿತ್ತು.

ಅಡರಿತ್ತು ನಭಕೆ ಧೂಮೋಲ್ಲಾಸ ; ಧಗಧಗನೆ
ತಕ್ಕತಕ್ಕೆಂದಿತ್ತು ಜ್ವಾಲೆ ; ಜಯಭೇರಿ ಹೊಡೆ
ಹೊಡೆದುಧೋ ಎಂದು ಕುಣಿದಿತ್ತು ದಳ್ಳುರಿ ; ನೀರ
ಕಾರಿ ಮರುಗಿತ್ತು ಹಸಿ ಸೌದೆ ; ಬೇಯುವ ನನ್ನ
ಹೀರಿ ಗಹಗಹಿಸಿತ್ತು ಗಾಳಿಗೂಳಿ,
ನಾಗಾಲ ಬುಗುರಿ ಗಿರಗಿರನೆ ತಿರುಗಿ.

ಆಫೀಸು ಬೇಡ ; ಹೊರಡುವೆ ; ಹೊರಟೆ ಈ ಕ್ಷಣವೆ !
"ಎಲ್ಲಿಗೆ ? ಏತಕೆ ? ಬೇಡ, ಬೇಡ !"
ಬೇಕಿದೆ ತಂಪು, ತಂಪು !
ನರನೆತ್ತರನು ಗಡ್ಡೆಕಟ್ಟಿಸಿ ತಟ್ಟಿ
ಮಲಗಿಸುವ ತಂಪು, ಓ ಹೊರಟೆ, ಹೊರಟೇಬಿಟ್ಟೆ.

ತಣ್ಣಗೆ ಕೊರೆವ ಬೆಳ್ಳಿಯಿಳಿಜಾರು, ಹಿಮಹರ್ಮ್ಯ ;
ತಿಂಗಳಿನ ಹೋಳು ಬೋದಿಗೆ, ಬೆಳ್ಮುಗಿಲ ಸೂರು ;
ಮಂಜುಗಡ್ಡೆಯು ಕಿಂಡಿ, ಕದ, ಜಂತಿ, ಮಾಳಿಗೆ ;
ಹಾಲುಹೊಯ್ದ ಮಧುರ ನೆಲಗಟ್ಟು.
ಅಲ್ಲಿ ರೆಫ್ರಿಜಿರೇಟರಿನ ಖಾನಿಯಲ್ಲಿ ಹಳಸದ ತಿಂಡಿ
ಸರ್ವದಾ ಸಿದ್ಧ ; ಸರ್ವತ್ರ ಶುಚಿ, ರುಚಿ, ತಂಪು :
ಐಸ್‌ಕ್ರೀಮು, ಫ್ರುಟ್‌ಸಲಾಡ್, ಬಾಸುಂದಿ, ಐಸ್‌ಕ್ಯಾಂಡಿ.
ಹೋಗಬೇಕಯ್ಯ ಒಂದೇ ಒಂದು ಸಲ ಸಾಕು.
ಚಾಚಿ ಕಾಲನು ಮೆತ್ತೆಮೇಲೆ ಕುಳಿತೆಲೆ ಮಾಣಿ
ಆದನು ತಾ, ಇದನು ತಾ, ಒಂದು ಪ್ಲೇಟ್, ಎರಡು ಪ್ಲೇಟ್,
ಮೂರು ಪ್ಲೇಟ್, ನೂರಾರು....
ಆದರಯ್ಯೋ ಜೇಬಲಿಲ್ಲವೋ ಚಿಕ್ಕಾಸು;
ಅಪ್ಪ ಬಿಟ್ಟದ್ದು ಬರಿ ಸೊನ್ನೆ ; ಅವ ಕೊಟ್ಟದ್ದು
ಸೊನ್ನೆಗೂ ಸೊನ್ನೆ ; ನಾ ಪಡೆದದ್ದು ಬರಿ ಗೋಳ !

ಹೊರಗೆ ಅಗ್ನಿಪ್ರಳಯದಲ್ಲಿ ತೇಲುವ ಕಲ್ಲು–
ಬೆಂಚಿನಲಿ ಕುಳಿತು ನಿಟ್ಟುಸಿರು ಬಿಟ್ಟೆ :

" ಪುನರಪಿ ಜನನಂ ಪುನರಪಿ ಮರಣಂ
ಪುನರಪಿ ಜನನೀಜಠರೇ ಶಯನಂ
ಇಹ ಸಂಸಾರೇ ಖಲು ದುಸ್ತಾರೇ
ಕೃಪಯಾಪಾರೇ ಪಾಹಿ ಮುರಾರೇ "

ಕರೆಯುತಿದೆ ಹಿಮಗಿರಯ ಕಂದರ :
"ಬಂದೆಯಾ, ಮಗು, ಬಂದೆಯಾ !"

ನಡೆಯೊ ಅಲ್ಲಿಗೆ ಮುಚ್ಚಿದೆವೆಮೇಲೆ ತಂಗಾಳಿ
ತಿಂಗಳನು ಲೇಪಿಸುವ ಪರ್ಣಕುಟಿಗೆ :

ಸಿಪ್ಪೆತಿರುಳಿರದ ಬರಿ ಬೀಜ ಕುಪ್ಪಳಿಸಿರುವ
ತಿನದ ತೇಗಿನ ಮೂಕ ಸರಿಗಮಕ್ಕೆ.

ಏಕವರ್ಣದವರ್ಣನಿಯ ಶಾಂತಿಯ ತಂತಿ
ಮೀಟುತಿರೆ ಅಲ್ಲಲ್ಲಿ ಹಸುರ ಬೆರಳು,
ದೇವಲೋಕದ ಪಕ್ಷಿ ಬಂದು ಕೊಂಕಲು ಕೊರಳು
ಅರಳುವುದು ಮಂದಾರಗೀತದುರುಳ್ಳ.
ನಾರದರ ತುಂಬುರರ ತಂಬೂರಿದನಿ ತುಳುಕಿ
ತುಂಬುತಿದೆ ಹಿಮಗಿರಿಯ ಹಳ್ಳಕೊಳ್ಳ ;
ಅಶ್ವತ್ಥವೃಕ್ಷಗಳ ಛಾಯೆ ಚಾವಡಿಯಲ್ಲಿ
ಕುಳಿತು ತಲೆದೂಗುತಿವೆ ಯೋಗವೆಲ್ಲ.

ಹಿಮದ ಹಂದರದಲ್ಲಿ ಗಾಳಿಬೀಳಿನ ಮೇಲೆ
ಉಯ್ಯಾಲಾಡುವ ಬೆಳ್ಳಿಗಡ್ಡ ಸಾಲು ;
ಸರ್ಚ್‌ಲೈಟು ಕಣ್ಣುಗಳು ಹೊಳೆವ ಕಗ್ಗವಿ ಬಾಯಿ ;
ನಿನ್ನ ನೆಲಮಾಳಿಗೆಯ ತೆರೆದು ತೋರು.

ಕಾಲನಿಟ್ಟಲ್ಲಲ್ಲಿ ಕೀಲುಗುದುರೆ ಸವಾರಿ,
ಕೈಚಾಚಿದಲ್ಲೆಲ್ಲ ಸ್ವಿಚ್ಚು ;
ಎಲ್ಲಿ ತಿರುಗಿದರಲ್ಲಿ ಅಮೃತ ಸೂಸುವ ನಲ್ಲಿ–
ಈ ಕಛೇರಿಗೆ ಮನೆಗೆ ಬೆಂಕಿಹಚ್ಚು !

ಟಿಕ್, ಟಿಕ್, ಟಿಕ್, ಟಿಕ್....
ಎಲ್ಲಿ ಇತ್ತೀ ವಾಚು ?
ಕೀ ಕೊಟ್ಟ, ದಿದಕೆಷ್ಟ, ಜನ್ಮದಾಚೆ ?
ಈಗ ಗಕ್ಕನೆ ರೆಕ್ಕೆ ಬಡಿದು ಬಂದಿತು ಇಗೋ
ಕಕ್ಕುತಿದೆ ಕರಳನ್ನ–ತಡೆಯಲಾರೆ

ಹತ್ತಾಳು ಅಡಿ ಹೂತು ಹೆಣವ ಹಾಕಿದೆ ಗಾರೆ ;
ಮೇಲೆ ಕುರ್ಚಿಯನಿಟ್ಟು ಮೇಜ ಮೇಲೆ
ಚಾಚಿ ಕಾಲನು 'ಟೈಂಸ್ ಆಫ್ ಇಂಡಿಯಾ' ಚಾಪಲ್ಯ
ಹುಬ್ಬನೆತ್ತುತ್ತಲಿರೆ ಹಲ್ಲು ಕಿರಿದು–
ಕಣ್ಣೆದುರು ನಡೆದಿದೆ ವಿಮಾನದಪಘಾತ ; ಇಗೊ
ಕಂಬಿ ತಪ್ಪಿದ ರೈಲು ಬಿತ್ತು ಕೆಳಗೆ ;
ಹೊಟ್ಟೆಗಿಲ್ಲದೆ ಅವಳು ಮಗುವ ಬಾವಿಗೆ ನೂಕಿ
ಹಾರಿದಳನಾಥೆ ಈ ಜನ್ಮ ರೋಸಿ–
ಸದ್ದು ! ಮೂಳೆಯ ರಾಶಿಮೇಲೆ ಜಿರಳೆಯ ನಡಿಗೆ !
ಹೂತವನ ಉಸಿರ ಕಸಿವಿಸಿ, ಹಿಮ್ಮಡಿಗೆ ತಾಗಿ
ಹಬ್ಬವೊಲು ವಿಷ, ಮೇಲಕೇರುತಿತ್ತು ;
ಹೊರಳುವುರುಳುವ ಹೆಣದ ನಿಶ್ಶಬ್ದ ಶಬ್ದ ತಿವಿ–
ದಿತು ಕುಂಡೆಯ ಮಂಡೆ ಕೊಡವಿ ಎದ್ದೆ.
ಢಮರು ಢಮಢಮರು ಢಮ್ಮಢಮ್ಮ–ದೂರದ ಬೆಟ್ಟ–
ದಿಳಿಜಾರು ಮುಸುಗುಟ್ಟಿ ಮಾರಿಜಾತ್ರೆ
ಇಳಿದು ಬರುತೇರೇರುತಿತ್ತು ಡಬಡಬ ಢಬ್ಬ–
ಕಿವಿಗಿಟ್ಟು ಬೆರಳ, ಹಾ, ಮುಚ್ಚು ಮುಚ್ಚು ;
ಕುರಿಯ ಕೊರಳಿನ ಗಂಟೆ ಮೊಳಗಿ ಬಲಿಮರದಾಚೆ
ಹಸಿದ ಕತ್ತಿಯ ಹಲ್ಲು ಕಟೆಯುತಿತ್ತು.

ಮಲಗಿದೆವೆಗಳ ನಡುವೆ ಕನಸುನವೆಗಳನೂರಿ
ಕಗ್ಗವಿಯ ಬಚ್ಚುಬಾಯ್ದೆರೆಗೆ ಟಾರ್ಚನು ತೂರಿ
ಬುರುಡೆಯೊಳಗೊಂದೆರಡು ಜಿರಳೆಗಳನಿಟ್ಟು
ಹೊಟ್ಟೆಯೊಳಗಿಂದಿಷ್ಟು ಹರಳೆಣ್ಣೆ ಬಿಟ್ಟು
ಮಾಂಸಸಾಂಬ್ರಾಣಿಬಾಲಕೆ ಕಕ್ಕಡವ ಕಟ್ಟಿ
ಕಿವಿಯ ಸುತ್ತಲು ಢೋಲು ಡಮರು ತಮ್ಮಟೆ ಚಂಡೆ
ಬಡಿದು ಬಾರಿಸಿ ಪಾಂಚಜನ್ಯ ಮೊಳಗಿ
ಕಣ್ಣೆದಿರು ಸತ್ತು ಸಾಯದ ಹೆಣದ ಮೆರವಣಿಗೆ :

ಕೃಷ್ಣ ಶಂಕರ ಬುದ್ಧ ರಮಣ ಅಲ್ಲಮ ರೈಕ್ವ
ಯಾಜ್ಞವಲ್ಕ್ಯ, ವಿದೇಹ ಯೇಸು ಜಾಬಾಲಿ–
ಕಗ್ಗವಿಯ ಹೊಟ್ಟೆ ತೊಳಸುವ ಲಕ್ಷದೀಪದುಟಿ–
ಛಟ ಛಟೆಂದಾಡಿತ್ತು ಬಾಣ ಬಿರುಸು ;
ಗುಡುಗು ಗುಡುಗಿತ್ತು, ಸಿಡಿಲು ಸಿಡಿದು ಫಳ್ ಫಳ್ಳೆಂದು
ಮಿಂಚು ಕೋರೈಸಿ ಮನ ಗೋಡೆಬಿದ್ದು
ನುಗ್ಗಿ ಬಂದಿತ್ತೊಳಗೆ ಹಳ್ಳಕೊಳ್ಳದ ನೆಗಸು–
'ಬಂಡ್ವಾಂಗ ಮೈಯ್ಯಾಗ' ಪಾತ್ರಿ ಮೈ ಕೈ ಕುಲುಕಿ
ಸೈಬೇರಿಯಾದ ಹಿಮಭಾಷೆಯುಲಿದ ;
ಹೊಸ ನುಡಿಯ ನುಡಿಕಟ್ಟನುಗಿದು ನೆಗೆದ ;
ಹರಿದ ಡೋಲಿನ ತೂತು ಡಬ್ಬಡಬ್ಬೆಂದಿತ್ತು,
ತಂತಿ ಫಟ್ ಎಂದೇಕತಾರಿ ಮುಲಕಿತ್ತು :
'ಹಿಮಗಿರಿಯ ಕಂದರ,
ಆ ಶ್ವೇತಸುಂದರ.'

ಏಕಾದಶೀ ದಿವಸ ಉಪವಾಸ ನಿಂದಿರಾ ?
ಅವಲಕ್ಕಿ, ಉಪ್ಪಿಟ್ಟು, ಹಳದಿಯ ಅನ್ನ ಮೆಂದಿರಾ ?
ನಾರಾಯಣಾ, ಗೋವಿಂದ, ಶಿವಶಿವಾ ಎಂದಿರಾ ?
'ನಾಹಂ ಕರ್ತಾ' 'ಬ್ರಹ್ಮಾರ್ಪಣಂ' ಲೊಚಗುಟ್ಟಿಕೊಂಡಿರಾ ?
ಸರಿ, ಸರಿ ; ನೀವೇ ಸರಿ. ಕಿವಿ ಮುಟ್ಟಿ ನೋಡಿದಿರ ?
ಮೂಡಿತ್ತಲ್ಲವೆ ಹೇಳಿ ಕಿವಿಗೆ ರೆಪ್ಪೆ !
ಈ ಕೂಗ ಕೇಳುವರೆ ನೀವು ಬೆಪ್ಪೆ ?

ಇಲ್ಲ ನಿಮ್ಮದು ಮತ ಅದೆಲ್ಲಿ ? ಕೇಳಿಸಲಿಲ್ಲ.
ಮೂಕ್ಕೋವೆ ? ಸರಿ, ಸರಿ. ಬೈಸ್ಕೋಪಿಗೆ
ಹೋಗಿ ತೆರೆನೆರಳೊಡನೆ ಆಡಿ ಕುಸ್ತಿ :
ಇರಲಿ ನಿಮಗೂ ಕೂಡ ಸ್ವಸ್ತಿ ಸ್ವಸ್ತಿ !

ನನಗೊ !–
ತಂತಿ ಟಪ್ಪಾಲುಪೇದೆಯು ಸೈಕಲಿನ ಗಂಟೆ !
(ಭಾನುವಾರವು ತಪ್ಪಲಿಲ್ಲ ತಂಟೆ)
ಏಕೆ, ಏನಣ್ಣ, ಆಹ, ಕುಳಿತೆ ಬಿಟ್ಟೆ ?
ಏನು, ಟಪ್ಪಾಲುಪೇದೆಯೋ, ಅಮೀನನೊ ? ಕೆಟ್ಟೆ !
ಒದ್ದೆ ಪಂಚೆಯ ಕಾಟ–ಉಂಟೆ, ಉಂಟೆ ?
ಕಾಫಿ ಮಾಡಿಸಲೆ ? ಸಿಗರೇಟು ತರಿಸಲೆ ? ಇಲ್ಲ,
ಅವಲಕ್ಕಿ ಮೊಸರಷ್ಟು ಕಲಸಿ ಕೊಡಲೇ ?
ರಾತ್ರಿ ರೈಲಿಗೆ ಸೆಕೆಂಡ್ ಕ್ಲಾಸ್ ರಿಸರ್ವ್ ಮಾಡಿಸಲೆ ?
ಬೇಡ ? ಪರಮಾಶ್ಚರ್ಯ ! ಗಂಟುಮೂಟೆಯ ಕಟ್ಟಿ
ನಾನೆ ಈ ಮನೆ ಬಿಟ್ಟು ಹೊರಡಬೇಕೆ ?
ಬಿಳಿಯ ಚಿಗುರೆಲೆ ಅಡಿಕೆ, ಸುತ್ತ ಮೆತ್ತನೆ ದಿಂಬು,
ಬಂದು ಬಿದ್ದಿದೆ ಇಲ್ಲಿ ದಿನಪತ್ರಿಕೆ ;
ತುಟಿತೊಡೆಯ ಸುಟಿಮುದ್ದು ಕೈ ಚಾಚಿದಲ್ಲೆ ಇದೆ
ಮೈಚಾಚಿದಲ್ಲೆ ಹೂಹಾಸಿಗೆ ಇದೆ.
ಸಂಜೆ 'ಗಾಯತ್ರಿ' ಯಲಿ ಚಿತ್ರ ; ಕಾಫಿ, ಮಸಾಲೆ
ದೋಸೆ ; ಆಡೆನ್ ಬರೆದ ನವ್ಯ ಕವಿತೆ ;
ಅರಬಿಂದೊ 'ಲೈಫ್ ಡಿವೈನ್', 'ಟ್ರೂರೋಮಾನ್ಸ್‌ಸ್', ಗೀತೆ ;
ಇಲ್ಲಿ ರಸ್ಸೆಲ್, ಅಲ್ಲಿ ಕಾಫ್ಕ, ಹಕ್ಸ್ಲೀ–
ಮೂಳೆಕರಗವ ಹೊತ್ತು ಕುಲುಕುತಿರುವನು ಜೊಂಬ ;
ಫೋಂ ಫೋ ಫೋಂ–ಕಾರು ; ಭೋಂ ಭೋಂ ಭೋಂ–ಬಸ್ಸು ಟ್ರಕ್ಕು,
ಅಯ್ಯೊ ತಡೆಯೋ–ಅಣ್ಣ–ಕೊಂಚ ತಡೆಯೋ !
ಲೋಭಾನ ಹೊಗೆಯ ನಗೆಮುಗು ಬೀದಿ ಪೋಲೀಸು
ದಾರಿ ತಡೆವುದು, ನೂರು ಬಸ್ಸು, ಕಾರು.
ಏನು ಬರಲೇ ಬೇಕೆ ? ಬೇಕೆ ? ಬರುವೆನು ನಾಳೆ,
ಆಗದೆ ? ಮುಗಿಯದೇ ನಿನ್ನ ರಗಳೆ ;
"ಕರೆಯುತಿದೆ ಹಿಮಗಿರಿಯ ಕಂದರ,
ಬಂದೆಯಾ–ಮಗು–ಬಂದೆಯಾ ?"

ಫೋಂ ಫೋ ಫೋಂ–ಕಾರು; ಭೋಂ ಭೋಂ–ಬಸ್ಸು, ಟ್ರಕು;
ಬೀದಿ ಲಕ್ವಾ ಹೊಡೆದು ಮಿಡುಕುತಿತ್ತು.
ಖಟ್ಟ, ಖಟ ಖಟಖಟ್ಟ–ಹತ್ತು ಎತ್ತಿನಗಾಡಿ !
ಮೂಗು ಮುಚ್ಚಿಕೊ : ನಗರಸಭೆಯ ಲಾರಿ.
"ಬದನೆಕಾಯಿ, ಭೆಂಡೆಕಾಯಿ, ಸೊಪ್ಪು, ಮೆಂತ್ಯದ ಸೊಪ್ಪು,
ಚಕ್ಕೋತನ ಸೊಪ್ಪು, ಹರಿವೇ ಸೊಪ್ಪು, ಅವರೆ, ಮೂಲಂಗಿ.
"ಬೇಕೆ ಕಡಲೇಕಾಯಿ, ಪುರಿ, ಪುಟಾಣಿ....
ಪಾವಿಗೊಂದೇ ಆಣೆ, ತೆಕಣೆ, ತೆಕಣೆ"
"ರಿಪೇರಿ, ರಿಪೇರಿ, ಛತ್ರಿ ರಿಪೇರಿ...
ಬೀಗ ರಿಪೇರಿ,
ಟ್ರಂಕು ರಿಪೇರಿ, ರಿಪೇರಿ, ರಿಪೇರಿ.,."
ಮನೆ ಹುಡುಗರೆಲ್ಲ ಗೇಟಾಚೆ ಕಾದರು ಕೂಡ
ದಿನವೆಲ್ಲ, ಆ ಅವನು ಬರಲೇ ಇಲ್ಲ.
"ತಲೆ ರಿಪೇರಿ ?
"ಮುರಿದ ಮನ ರಿಪೇರಿ ?
"ಉರಿದ ಎದೆ ರಿಪೇರಿ ?"

ಎಲ್ಲಿ ಹೋದನು ಮುದುಕ ? ಯಾವ ಒಡಗುಡಿಸಲಲಿ
ಯಾವ ಹಣತೆಯ ಮುಂದೆ ಅಡಗಿ ಕುಳಿತ ?
ಕಾದ ಏರದ, ಗಾಡಿ ಕೂಡ ತಾಗದ ಯಾವ
ತಪ್ಪಲಿನ ಗುಹೆಯಲ್ಲಿ ಮೈಯ ಮರೆತ ?

ಮೂಡಿದೆ ಗುಲಾಬಿದಳದಲಿ ಮುಳ್ಳು , ಸಂಪಗೆಯ
ಕಂಪಿನಲಿ ಕಾಳ್ಕಿಚ್ಚು ಬುಸುಗುಟ್ಟಿದೆ ,
ಮೆತ್ತೆಯಲಿ ಕುಟುಕುತಿದೆ ನೂರು ಚೇಳಿನ ಕೊಂಡಿ,
ಹಾಲು ಹಾಲಾಹಲದ ಗುರಿಮುಟ್ಟಿದೆ.
ಕಾಳನಾಗರ ನೇತ್ರಭೀತ ಪರವಶ ಪಕ್ಷಿ
ಮತ್ತೆ ರೆಕ್ಕೆಯ ಬಿಚ್ಚಿ ಗರಿಗಟ್ಟಿದೆ

ರಕ್ತತವಾಲಚ್ಛಾಯೆಯಲ್ಲಿ ಬಿಚ್ಚಿತು ಬೋಧಿ–
ವೃಕ್ಷದಗ್ನಿಯ ಛತ್ರಿ–ಕೊನೆಯ ರಾತ್ರಿ !
ನಿದ್ರಿಸಿದ ಮುದ್ದುಮಗುವನು ತಬ್ಬಿ ಕಣ್ಣಿಂದ,
ಕದ್ದು ಅವಳೆಡೆ ಸತ್ತಮುತ್ತ ತೂರಿ,
ಎದ್ದು ನಿಂತೆನು ಕೋಟು ತೊಟ್ಟು ಚಪ್ಪಲಿಮೆಟ್ಟಿ–
ಅರ್ಜಂಟಿನಲ್ಲಿ ಕೈಕೊಟ್ಟಿತು ಅಲಾರಮ್ಮು !
ಬಾರಿಸಿತು ಮುಂಜಾನೆಯಾರು ಗಂಟೆ ;
ಸಡಲಿತ್ತು ಬಿಗಿದಿದ್ದ ಮಣ್ಣ ಹೆಂಟೆ ;
ಜಗಭಾರವಾಗಿತ್ತು ಕೊರಳ ಕುಂಟೆ–

ಸಿಗರೇಟು ಪ್ಯಾಕೆಲ್ಲ ಖಾಲಿ ; ಖಾಲಿ ;
ಬರದೆ ಹೋದನು ಮಾತುಕೊಟ್ಟ ಚೆನ್ನ, ಹಮಾಲ !
ಹೋಗುವುದೊ ಅರ್ಜಂಟು.
ಹೊರಬೇಕೆ ಈ ಗಂಟು ?
ಬಂತಲ್ಲ ಗ್ರಹಚಾರ ?
ಹೋಗಬೇಕೆ ?
ಕಾಫಿ ಕುಡಿಯದೆ ರೈಲು ಹತ್ತಬೇಕೇ ?–
ಹತ್ತಿ
ಹೋಗಬೇಕೆ ?

ಭಗ್ನ ಸೇತುವೆಯಾಚೆ ರೈಲು ನಿಂತು
ಸೀಟಿ ಹಾಕಿತು ಮೂರು ಬಾರಿ , ಹೊರಟಿತು ಹಿಂದೆ;
ಎದ್ದ ಕೈಮರ ಬಿದ್ದು ಜೋಲುತಿತ್ತು,
ಮುಲುಕಿ ಗಾಲಿಯು ದೂರ ಕಿರಲುತಿತ್ತು :
"ಹಿಮಗಿರಿಯ ಕಂದರ....
ಗಿರಿಯ ಕಂದರ....
ಕಂ...ದ...ರ...
...ದ...ರ...
...ರ..."

# ಯುಗಾದಿ

ಹಳ್ಳಿ ಮನೆಯ ಮುರುಕು ಜಂತಿಯ ಮೇಲೆ ಮುದಿಗೂಬೆ ;
(ಹಗಲಿರುಳು ಗೊರಕೆ, ಗೊಣಗಾಟ ಕಣೊ, ಪಾಪಿ–ದ್ರಾಬೆ !)
ಮೊಳತರೂ ಬೆಳಕು ಮೂಡಲಲ್ಲಿ ನೆತ್ತರ ಧಾರೆ
ಧುಮುಕಿದರು, ಗಿಡಗಂಟಿ ನರನಾಡಿಯಲ್ಲಿ ಹೊಸ ಉದಯರಾಗೋದ್ವೇಗ
ಕೊ ಎಂದರೂ ಕೂಡ ;
ಮಬ್ಬು ಹರಿದರು ಹರಿಯದಿದರ ಸರಪಣಿಕೂಗು, ಸೋಗು.
ಅದೇ ನನಗು ನಿನಗು, ಎಲ್ಲರಿಗು ಮೂಗುದಾರ !
ಗಾಳಿ ಕೂಡ ಭಾರ ; ಹೂವು, ಚಿಗುರೆಲೆ, ಮೊಳಕೆ,
'ಕುಣಿವ ಮಣಕ,'
ಮಣ್ಣಲ್ಲಿ ಕಣ್ಣನ್ನು ಬಿಡುವ ಭತ್ತದ, ಜೋಳರಾಗಿಗೋಧಿಯ ಸಸಿ ;
ಏನೊ ಕಸಿವಿಸಿ ;
ಆಕಾಶದಲ್ಲಿ ಆಡುವ ಮೋಡ
ದಿಙ್ಮೂಢ ;
ಕೆಸರಲ್ಲಿ ಕುಸಿದು ಬಿದ್ದಿದೆ ಮಿಾನ ; ಕಡಲಲ್ಲಿ
ಹೊಗೆಯುಗುಳಿ ಸಾಗುತಿರುವಾಗಬೋಟಿ ;
ರೈಲು, ಮೋಟಾರು, ಎತ್ತಿನ ಗಾಡಿ ಕೂಡಾ ;
ಕಾರ್ಖಾನೆಯಲ್ಲಿ ಉಗಿಯಂತ್ರಚಕ್ರ ,
ಗೂಡಲ್ಲಿ ರೆಕ್ಕೆ ಹೊರೆಯದ ಹಕ್ಕಿ : ಅಂಗಳದಿ
ಅಂಬೆಗಾಲಿನ ತುಂಬುನಗೆಯ ಚುಕ್ಕಿ ;
ಎಲ್ಲಕ್ಕು ಕಟ್ಟಿದಂತುಸುರು ; ತಾಸಿಗೆ ಒಮ್ಮೆ
ಜುಗು, ಜುಗು, ಜುಗು, ಜುಗು,–ಮತ್ತೆ ಸ್ತಬ್ಧ !
ಮಲಗಿದಾತನು ಎದ್ದ, ಮತ್ತೆ ಬಿದ್ದ.
ಸಾಲೆಯಲಿ ಪುಸ್ತಕದ ಮೇಲೆ ಗೂಬೆಯ ನೆರಳು–
ಅತ್ತ ಹಿಮಗಿರಿಗೆ, ಇತ್ತ ರಾಮೇಶ್ವರಕೆ

ಆ ಕೂಗಿನುರುಳು.
ಸುಟ್ಟು ಸಿಡಿಯಲಿ ಸುಟ್ಟ ಗೂಬೆಕಣ್ಣಾಲಿ ;
ಅಟ್ಟದನು ಹೊರಗೆ–ಅಪಶಕುನ–ಕೊಟ್ಟಿಗೆಯಾಚೆ,
ಉತ್ತು ಬಿತ್ತಿದ ಗದ್ದೆಯಾಚೆ, ಬಯಲಾಚೆ,
ತೋಪು ತೋಟಗಳಾಚೆ, ಊರಾಚೆ, ನೆಲದ ಆಚೆ.

ಬಾ ಮತ್ತೆ ಮನೆಗೆ ಕೆರೆಯಲ್ಲಿ ಬೆಳ್ಳಗೆ ಮಿಂದು,
ತಾವರೆಯ ಹೂವೆರಡು ಕಿತ್ತು ತಂದು ;
(ಜುಟ್ಟು ಇದ್ದರೆ ಅವನ್ನು ಎತ್ತಿ ಮುಡಿದು ;)
ತಿನ್ನು ಬೇವಿನ ಸೊಪ್ಪು, ಬೆಲ್ಲ–(ಇದೆಯೋ ಬೆಲ್ಲ ?)
(ಚಾ ಕುಡಿದರೂ ಕೂಡ ಇಲ್ಲ ಭಂಗ)
ಕೊಂಚ ಕುಳಿತುಕೊ ಕೇಳು, ನಿನ್ನ ಪಂಚಾಂಗ :–

ಎಲ್ಲ ಕಡೆ ಈಗ ಹೊಂಬೆಳಕು ; ಹೊಗೆ ಗಿರಣಿಯಲಿ ;
ಬಸ್ಸು ಹೊರಟಿತು ಕಡುಬಿನಟ್ಟದಟ್ಟ ;
ಮಿಲ್ಲುಗೇಟಿಗೆ ಇರುವೆಸಾಲು ಜನ ; ಬಗಲಲ್ಲಿ
ಪುಸ್ತಕದ ಚೀಲದೆಳನಗೆಯ ಓಟ.
ಸೂರ್ಯನಿಗು ಏನೊ ದಿಲ್‌ದಾರತನ ; ಅವನ
ಮೋರೆ ತಿವಿದರು ಮೋಡ ನಕ್ಕು ನಡೆದ.
ಇತ್ತ ರಸ್ತೆಯ ಮೇಲೆ ಬಾಣನಡಿಗೆಯ ಶಪಥ–
ಹಿರಿಯ ಸಿರಿಬದುಕುಗುರಿ ತೋಟಕ್ಕೆ. ಬಾವಿಯ ತುಂಬ
ನೀರು ; ತೆಂಗಿನ ಮಿಳ್ಳೆ, ಮಾವು, ದಾಳಿಂಬೆ, ನಿಂಬೆ.
ಗದ್ದೆಯಲಿ ಉದ್ದು, ಅಲಸಂದೆ, ಹುರುಳಿ ;
ಆಕಾಶದಲ್ಲಿ ಬೆದೆಗೊಂಡ ಆಕಳ ಹಿಂಡು ;
ಹಳೆ ಮನೆಗೆ ಹೊಸ ರಂಗು ಸುಣ್ಣಗಾರೆ.
ಗುಡಿಸಿ ಸಾರಿಸಿ ರಂಗವಲ್ಲಿ ಹಾಕಿ,
ಲೋಭಾನ ಹಚ್ಚಿ ;
ಮೂಲೆ ಮೂಲೆಯ ಜೇಡಬಲೆಗೆ ಕಿಚ್ಚನು ಹಚ್ಚಿ, ಕಿಟಕಿ
ಬಾಗಿಲನೆಲ್ಲ ತೆರೆದು ಅಗಲ ;

ಕಣಜದಲಿ ಮದವೆದ್ದು ಕಿಲಿಕಿಲಿಪ ಕಾಳು ;
ಅಂಗಳದಿ ಕೋಳಿ, ಗುಬ್ಬಚ್ಚಿ, ಕಾಗೆ,
ಹಸುಳೆಗಳ ನಗುವು ಕೇಕೆ.

ಪುಗ್ಗೆ ತುಂಬ ಗಾಳಿ ;–ಹಸುರು, ಅರಸಿನ, ನೀಲಿ–
ಹಾರಿ ಏರಲಿ ಬಾನ ಮುಟ್ಟಿ : ತೆಂಗಿನ ಜುಟ್ಟು
ಹಿಡಿದು ಸಿಂಗಾರ ಹೂಗೊನೆಗೆ ಜೋತು ;

ತೆನೆಗಳಲಿ ಕೂತು ಉಯ್ಯಾಲೆಯಾಡಿ ;
ನೀರು ತುಂಬಿದ ಮೋಡದಲ್ಲಿ ಈಸಾಡಿ ;
ತಾರೆತೊಟ್ಟಿಲಿನಲ್ಲಿ ಕೂತು ಕೊಂಚ ;
ಉತ್ಸವದ ಉತ್ಸಾಹತೇರು ಇಳಿಯಲಿ ಕೆಳಗೆ,
ನೆಲಕೆ ;
ತೆಂಗು ಕರ್ಪೂರದಾರತಿ, ಕೆಲಕೆ ಬಲಕೆ.

ಮಾಗಿತಲೆ ಮೆಟ್ಟಿಬಂತು ಯುಗಾದಿ ; ಹಿಡಿ ಹಾದಿ ;
ರಸ್ತೆ ಧೂಳಿಗೆ ನಿನ್ನ ಬೆವರ ಜಳಕ.
ಆಮೋದಕೀಗ ಪೂರ್ಣವಿರಾಮ ; ಹೊಸವಾಕ್ಯ
ಪುಸ್ತಕದ ಕೊನೆವರೆಗೆ ಮುಗಿಯಲಾರ.
ಹೊತ್ತು ಹುಟ್ಟುವ ಮೊದಲೆ ಕಟ್ಟು ಸೊಂಟವ ಕೊರಳ
ಗಂಟೆ ಗಣಗಣ ಮೊಳಗುವೆತ್ತು, ನೊಗನೇಗಿಲು
ಹೊತ್ತು ನಡೆ ಗದ್ದೆಗೆ ;
ಉಳು ರವಿಯು ಸಪ್ತಾಶ್ವರಥವ ಬೆಂಬತ್ತಿ.
ಹೊಡೆದು ರೆಂಟೆಯು ನೆಲವ ಮಾಡು ಹಸನು.
ಬಿಸಿಲಲ್ಲಿ ಬೀಜ ಒಣಗಲಿ ; ಬೇಡವೊ ಗಲಾಟೆ.
ಇನ್ನು ಇದೆ ಬೇಕಷ್ಟು ಹೊರಲು ಮೂಟೆ.
ತುಟಿಯೆರಡಕೂ ಹಾಕು ಭದ್ರ ಹೊಲಿಗೆ,
ಕಟ್ಟು ನಾಲಗೆಯ ಎದೆತಳದ ನೊಗಕೆ ;
ಉಳುವುದೆಷ್ಟೋ ಅಷ್ಟು, ಹೊರುವುದೆಷ್ಟೋ ಅಷ್ಟು,

ನೆಲಕೆ ನಿನ್ನದೆ ಸುರಿವುದೆಷ್ಟೊ ಅಷ್ಟು.
ಉಳಿದದ್ದು ಅಡರಿ ಬಂದೀತು ಕಡಲೆದೆಯಿಂದ ;
ಇಳಿದೀತು ಬಿಡುಗೆಚ್ಚ ಲಾಕಾಶದಿಂದ ;
ಪ್ರಕೃತಿಧರ್ಮದ ನಿಯತ ಕಾಮದಿಂದ ;
ನೆಲದ ಮೊಲೆ ತೊರೆಹರಿದ ಪ್ರೇಮದಿಂದ.

ಮಾರ್ಚ್, ೧೯೫೩

# ದೀಪಾವಳಿ

ಎಲಾ ಇವನ, ಕಿಟಕಿಯೆಲ್ಲ ಮುಚ್ಚಿದ, ಕದವಿಕ್ಕಿದ ;
ಕಗ್ಗತ್ತಲಲ್ಲಿ ಕುಕ್ಕರಿಸಿದ ;
ಪುಪ್ಪುಸ ಕತ್ತರಿಸುವ ಹೊಗೆ ;
ಇಲಿ ಬಾವಲಿ ಕೀಚುನಗೆ.
ಮುದಮುದಗಜನಿನಾದ ಹೊರಗೆ.
ಏಳು ತಡಕು, ಹುಡುಕು ಚಿಲಕ.
ಇಡು ಚಿಲಕದ ಮೇಲೆ ಕೈ :
ಮೌನಮಸಣಬೂದಿಬಿಟ್ಟು, ಕೆಂಗೆಂಡದ ನುಡಿಕಿಡಿ ಬಾ ;
ತಟ್ಟು ಕದ, ತಟ್ಟು ಹದ ;
ಗೂಟದ ಕರು ಬಾ ; ಕೆಚ್ಚಲ ಕುಟ್ಟು, ಗುಮ್ಮು ;
ಒಸರಿತು ಸೊನೆ ; ಹಸುರು ನೆಲ ;
ಕೋಟೆಯು ಹೆಬ್ಬಾಗಿಲಬಳಿ:
'ಆನೆಬಂತೊಂದಾನೆ'.

ಬೀಗದ ಕೈ ?
ನಡೆ ಇಪ್ಪತ್ತಾರು ವರ್ಷ ದೂರ, ದೂರ ತೋಟಕ್ಕೆ–
ಮರಳಿನ ಕಿರು ಆಟದ ಮನೆ ; ಸುತ್ತ ಒತ್ತು ಮಾರಗಿಡಲತೆ ;
ಪೇರಳೆಗಿಡದಡಿ ಹೂವಿನ ಹುಡಿರಾಡಿಯ ಕೆದಕು, ಬೆದಕು.
ಹುಡುಕಿ ತರುವ ಭಟ, ಅಭಟ ?
ಮರೆತೆಯು ಆ ಅದ್ಭುತ ದೀಪದ ತುಕ್ಕಿನ ಕಕ್ಕುಲಾತಿ ?
'ಏನಪ್ಪಣೆ, ಏನಪ್ಪಣೆ ?'
ಪಟಾಕಿ, ಚಿನಕುರುಳಿ, ಹೂಬಾಣ, ಹೂವಿನ ಕುಂಡ ;
ಮರವೆಯಲಿ ನೆನಪು ಥಳಥಳಿಸಿ ಗರಗರ ಗೀರಿ
ಸರಭರೆನ್ನುತ್ತಲಿದೆ ಸೊಗದ ನೇಗಿಲ ಮೊನೆ.

ಬೆಳಗುವೆಳಮುಖ ಸುಖದ ಬೆಂದು. ಸುತ್ತಲು ವೃತ್ತವೃತ್ತ ತಿಮಿರಚ್ಛಾಯೆ.
ಹತ್ತು ತೆಂಗಿನ ಮರವ ಹೊತ್ತ ನಡುಗಡ್ಡೆಯಲಿ
ಹೊತ್ತು ನಿಶ್ಚಲ ಅರೆಕ್ಷಣ. ಮಿಂಚು. ಕತ್ತಲ ಕಡಲ
ಉತ್ತು ನಡೆದಿದೆ ಬೆಳಕುಹಡಗು ದಿಗ್ದೇಶಕ್ಕೆ.
ಸಿಡಿಮದ್ದಿನುಂಡೆ ಪ್ರತಿಮನೆಯಲ್ಲಿ, ಲಕ್ಷೋಪಲಕ್ಷ ರೂಪ ವಿಕಾರ,
ಶಬ್ದ ಸಾಕಾರ,
ಮೌನ ಮಸಣಕೆ ತಾಳಿಕಟ್ಟಿ ನಿಂತಪಚಾರ.
ಹನ್ನೆರಡು ತಿಂಗಳ ತಮಕ್ಕೆ ದೀಪಾವಳಿಯ ಬೆಳಕು ಆಹಾರ ?

.

ದಿನದಿನವು ಲಗ್ಗೆ ನಡೆದಿದೆ ಇವನ ದುರ್ಗಕ್ಕೆ.
ಕದ ತೆರೆಯಲಾರ.
ಹೊರಗೆ ವಿದ್ಯುದ್ದೀಪ ಲಹರಿ ಲಹರಿ ವಿಲಾಪ.
ಅಂತಃಪುರದಿ ಮಾತ್ರ ಅಂಧಕಾರಾಲಾಪ.
ಬೇಡ ಕಣೊ. ಸುಖದ ಕ್ಷಣ ಹಿಡಿದು ಹಾಕಿಸು ಕಟ್ಟು ;
ಕಣ್ಣ ಮುಂದೇ ಅದನು ತೂಗು ಹಾಕು.

ಇಂದು ದೀಪಾವಳಿಗೆ ತೆರೆ ಅಗಲ ಬಾಗಿಲ.
ಸೊಂಡಿಲಾಡಿಸಿ ಬರಲಿ ಆನೆ, ಮುದ ಮದ್ದಾನೆ.
ಬೆಳಕು ಬೃಂಹಿತದ ಸಂಹಿತೆ ಕೇಳಿ ತೊಳೆಸುಲಿ
ಒಳಮನೆಯ ಕಸವು ಕೊಳೆ, ಜೇಡರ ಬಲೆ.
ಮಸಣದಲಿ ಕ್ಷಣಕಾಲ ಭಟಭಟದ ಬಾಳ ಮೊನೆ.
ಪೇರಳೆಗಿಡದ ಕೆಳಗೆ ಮತ್ತೆ ಕ್ಷಣ ಮರಳ ಮನೆ.
ಎಲ್ಲು ಹೋಗದು ಕಣೋ ನಿನ್ನ ಆ ಕಾಳ ಕೋಣೆ.

# ಏನಾದರೂ ಮಾಡುತಿರು ತಮ್ಮ

ಏನಾದರೂ ಮಾಡುತಿರು ತಮ್ಮ ;
ನೀ ಸುಮ್ಮನಿರಬ್ಯಾಡ ;
ಆ ಸಸಿಯ ಕೀಳು, ಚಿವುಟೀ ಚಿಗುರ.
ಹೂವ ಕಂಡರೆ ಹಿಸುಕಿ ಬಿಸುಡು ; ಹುಲ್ಲೆಲ್ಲೆಲ್ಲಿ
ಅಲ್ಲಲ್ಲಿ ಕೊಳ್ಳಿ ಹಿಡಿದಾಡು ಲಂಕಾದಹನ.
ಮರಿಚಿಟ್ಟೆ, ಗಿಳಿ, ಗುಬ್ಬಿ–ಎಲ್ಲಿ ಕಂಡರೆ ಅಲ್ಲಿ
ಅಟ್ಟು, ಹಿಡಿ, ಕುಟ್ಟು ; ಕಿತ್ತೆಸೆ ಪಕ್ಕ ಪುಕ್ಕಗಳ.
ಕಾಡಾನೆ ಪೊಕ್ಕ ನಂದನದಲ್ಲಿ
ಬಿಕ್ಕುತಿದೆ ಇಲ್ಲಿ ಮಲ್ಲಿಗೆ ಅಲ್ಲಿ ಹೊಂಬಾಳೆ.
ಸುತ್ತಲೂ ಗೋಡೆಮೇಲೆಲ್ಲ ಪೌರುಷಬಲದ
ಸ್ವಿಚ್ಚು ; ಕಣ್ಣನು ಮುಚ್ಚು :
ಒತ್ತು ಹತ್ತಿಪ್ಪತ್ತನೊಂದೆ ಸಲ ; ನೆಲ, ನೀರು, ಆಕಾಶ–
—ಬಂಗಾರಮೊಟ್ಟೆಕೋಳಿಯು ಹೊಟ್ಟೆ–ಬಗೆ, ಸೀಳು.
“ಮಾಡು, ಇಲ್ಲವೊ, ಮಡಿ,”
ನಿನ್ನ ನಾಲ್ಕೂ ಕಾಲ ನರ್ತನಕೆ ಪ್ರತಿನಿಮಿಷ
ಏನಾದರೊಂದಕ್ಕೆ ಜಖಂ ಆಗದಿರೆ ನಿನ್ನ
ಅದ್ಭುತ ಪ್ರತಿಭೆಗೇ ಕುಂದು ಕಂಡೆಯ, ತಮ್ಮ.
ವಾನರನ ಮಾಡಮಾಡುತ್ತಲಿ ವಿನಾಯಕನ ಮಾಡಿಬಿಟ್ಟರು ಸರಿಯೆ.
ಯೋಚಿಸುವುದಳಿದು ಸುರಿವುದು ತೂಗಿ ತೂರುವುದು–
ಈ ಎಲ್ಲ ಗತಕಾಲದಾಪತ್ತು ;
ಸತ್ತ ಭಾವದ ಸಾಯಲಾರದ ಪ್ರೇತಸಂಪತ್ತು.

ಕಾಡು ಇದೆ, ಕಡಿ : ಸಿಗಿದು ಕಟ್ಟು ತೋರಣ. ಕೈಲಿ
ಕೊಡಲಿ ಇದೆ, ಮಚ್ಚು ಗರಗಸ, ಕತ್ತಿ ; ಎತ್ತೆತ್ತಿ

ಆಡಿಸಾಡಿಸು—
ಮಾಗಿಯಲಿ ಸುತ್ತಲು ಮಬ್ಬು ಕವಿದಾಗ,
ಮೋರೆ ಮೋರೆಯ ಮಧ್ಯೆ ಒಂದೆರಡು ಗೆರೆ ಮಂಜುಗೋಡೆ ನೆಗೆದೆದ್ದಾಗ,
ದಾರಿ ಕಣ್ಣೆದುರು ಕವಲೊಡೆದು ನಿಡುಸುಯ್ದಾಗ,
ಎರಡು ಗಿರಿಶಿಖರ ತಲೆಯೆತ್ತಿ ಮಾರ್ಮಲೆದಾಗ,
ಮರಮರದ ಮೇಲೆ ನೋಹಿನಿ ಕಣ್ಣು ಹೊಡೆದಾಗ–
ಚಿಂತೆಯೇ, ಧರ್ಮಸಂಕಟವೆ ?
ಛೀ, ತೆಗೆ ; ನೀನು ಸರಳ–
ಅದೆ ನಿನ್ನ ಹೆಗ್ಗಳಿಕೆ ;
ಕಣ್ಣಪಟ್ಟಿಯ ಕುದುರೆನೋಟ ನಿನ್ನಗ್ಗಳಿಕೆ.
ಕೈಗೇನೆ ಸಿಕ್ಕಿದರು ತಿನ್ನು ;
ಕಣ್ಣಿಗೆ ಏನು ಬಿದ್ದರೂ ಅದ ಹಿಡಿದು ಹಿಂಡು ;
ಕಾಲಿಗೆ ಏನು ತೊಡರಿದರು ಅದ ಹಿಡಿದು ಕತ್ತರಿಸು.
ಈ ಅಬಲೆ
'ಮಲಗಿರುವ ತಾಯಿ ಪೃಥಿವೀ'
ಸುಸ್ತಾಗಿ ಇಲ್ಲಿ ಮಲಗಿದ್ದಾಳೆ ; ಮುಗಿಲ ಕಡೆ
ಕಣ್ಣನೆತ್ತಿದ್ದಾಳೆ.
ಅವಳ ಅಂಗಾಂಗದಲಿ
ಒಂದಿಷ್ಟು ರಕ್ತ ಜಿನುಗುವ ತನಕ ಅದ ಕಚ್ಚಿ ಹೀರು.
ಮಾಂಸವಿಲ್ಲವೆ ?
ಮಾಂಸ ?
ಮೂಳೆ ನರ ಮಜ್ಜೆ ತೊಗಲಷ್ಟಾದರೂ ಇಹುದೋ ಅಲ್ಲೊ !
ಅಹಹಾ. ಗಂಡು ನೀ ಕಣೋ !

ಆ ಅಲ್ಲಿ ಇಹುದು ಜೀವದ ಬಾವಿ.
ಕಟ್ಟು ಯಾತವ–ಯಾತಕಾದರೇನಂತೆ ಅದು–
ಮೊಗೆ ನೀರ.
ಬಾವಿತಳ ತೊಳಸು ಹನಿಬನಿಯ ಕೊನೆ ಸಿಗುವನಕ.

ಪಾತಾಳಗರುಡಿ ಇಳಿದಿಳಿದು ತಡಕಲಿ ತಳವ.
ಅಣುವನೊಡೆ, ಮಹತ್ತನ್ನು ಪಡೆ.
ಬ್ರಹ್ಮಾಂಡಕ್ಕೆ ತೊಟ್ಟುಬಿಡು ಬ್ರಹ್ಮಾಸ್ತ್ರ.
ವಿಜಯೀ ಭವ.

ಏನಾದರೂ ಮಾಡುತಿರು ತಮ್ಮ ; ಸುಮ್ಮನೆ ಕೂತು
ನೆಲಕೆ ನೀ ಬರಿಭಾರವಾಗಬೇಡವೊ ; ನೆಲದ
ಭಾರ ಕಳೆಯಲು ಹೀಗೆ ಮಾಡು ನೀ ಸರಿ, ಸಹಜ. ೫೭

ಏಪ್ರಿಲ್, ೧೯೫೪

# ಕೃಷ್ಣನ ಕೊಳಲು

ನಿಂತೆ ರುಗ್ಣ ಗಿರಿಯ ಭಗ್ನ ಶಿಖರದ ಮದೆಕೂದಲ ಕೊಳೆ
ಕೋಟೆ ಕಳಗೆ.
ಬಿದ್ದ ಹಲ್ಲ ಬಚ್ಚ ಬಾಯಿ ಲೊಚಲೊಚ ಲಟ್ಟಣಿಸಿದಂತೆ
ಆಕಳಿಸುವ ಕಿರಲುಚಿಲಕ ;
ಅರವತ್ತರ ಕಚ್ಚೆಹರಕುತನದ ತೆವಲು ದುಡುಕಿದಂತೆ
ಹೆಬ್ಬಾಗಿಲಿನರೆ ತೆರೆದ ಬಾಯಿ.
ಕಮರುತೇಗು ಬಿಟ್ಟ ಮುಖವ ಮುದ್ರಿಸಿದೊಲು ಕೊತ್ತಳಗಳು ;
ಸುಕ್ಕುಗೋಡೆ ;
ಗಾರೆಬಿದ್ದು ಗೋಗರೆಯುವ ಇಟ್ಟಿಗೆ.
ಕುಸಿದ ಕಂಭ.
ಬಾಗಿದ ಬೆನ್ನೆಲುಬು ಜಂತಿ, ತೊಲೆ, ರೀಪು.
ಲೋಳೆಜೊಲ್ಲು ಚೆಲ್ಲಿದವೊಲು ಅಲ್ಲಿ ಇಲ್ಲಿ ಕೊಳೆವ ನೀರು ;
ಬಿರುಕುಗೋಡೆ ಸಂದಿ ಸಂದಿ ಜೇಡನ ಬಲೆ—ಪುರಾಕೃತದ
ಪೊರೆ, ಪೊರೆ, ಪೊರೆ–ಹೇರಿದೆ.
ಬಾಗಿಲ ಬಳಿ ಕೈದೊಣ್ಣೆಗೆ ಸಿಂಹಮುಖದ ಭೀಕರ ಹೊರೆ ;
'ದೊಂಗಲುನ್ನಾರು ಜಾಗ್ರತ !'
ಬಾವಲಿ ಹಳೆಯುಚ್ಚೆ ಹಿಕ್ಕೆ ಗಿಜಿಗಿಜಿಗಿಜಿಚಾವಡಿಯಲಿ
ಗೋಪಿಕೆಯರ ಹಳಸು ನೆಳಲ ಮೇಲೆ ನೊಣದು ಮುಸುರುತ್ತಿವೆ
ಮತಿದಾಸ್ಯದ, ಮತಹಾಸ್ಯದ ನೊಣ, ನುಸಿ.
ಬಾಲವಾಡಿಸುತ್ತ ನಾಯಿ
ಸತ್ತ ಗರುಡಪಕ್ಷಿರೆಕ್ಕೆ ಕಿತ್ತಾಡಿಸುತಿದೆ ಬಾಯಿ.

ಕಮಟುಸುರಿವ ಸುಪ್ಪತ್ತಿಗೆ :
ಮೇಲೆ, ಸುತ್ತ ಗೆದ್ದಲು.

ಬುಗುಟುಹಿಡಿದ ಮಂದಾಸನದಲ್ಲಿ ಗೂಗೆ ಘೂಕ್ಕೆಂದಿತು ;
ಸುತ್ತಮುತ್ತ ಮರಿಗಿಳಿಗಳ, ಕೋಗಿಲೆಗಳ ರೆಕ್ಕೆ, ಪುಕ್ಕ.
ಮೂಲೆಯಲ್ಲಿ ಲೊಚಗುಟ್ಟುವ ಹಾಳುಹಲ್ಲಿ.
ಬೂದಿಸೆರಗ ಮೋರೆಗೆಳೆದ ವಿಧವೆ ಬೆಂಕಿ ಮೂಲೆಯಲ್ಲಿ.
ಹತಾಶ ಕೃತಕ ಕಾಮಾಗ್ನಿಯ ಜ್ವಾಲೆ ಕೊಂಚ ಬುಗ, ಬುಗ.
ಇಟ್ಟಿದೆ ಬಿಸಿಬಿಸಿ ಚಕ್ಕುಲಿ, ಕೋಡುಬಳೆ, ತಂಬಿಟ್ಟು,
ಹತ್ತು ತೆರದ ಉಂಡೆ, ಬಾಳೆಹಣ್ಣು, ಹಣ್ಣು ಸೀಬೆ ಹೋಳು.
ಒಡೆದ ಕೊಳಲ ಮೇಲೆ ಗಿರಣಿ ಸ್ವೈರನ್ನು ಪಿಶಾಚ ಪಾದ.
ನೆಗಡಿಬೀಗ ಜಡಿದ ಕಂಠದಿಂದ ಹೇಗೊ ಹಾಗೆ ಗಾಳಿ
ಕ್ಯಾಕರಿಸಿತು ಸುತ್ತಲೂ.

ಹೊರತೋಟದ ದಾರಿ ತುಂಬ ಸುಟ್ಟ ಹುಲ್ಲು ಧೂಳು ತರಗು,
ಎರಡೂ ಕಡೆ ಕಟ್ಟಿಗೆ ಮರ.
ನೀರಿಲ್ಲದ ಅರವಟ್ಟಿಗೆ.
ಹೂವಿನ ಹುಡಿರಾಡಿ ಕುಕ್ಕಿ ಕಾಗೆ ತಾನೆ ಕೋಗಿಲೆವೊಲು ಅನ್ನುತ್ತಿದೆ
ಆಗೀಗ–
'ಕಾಕೂ, ಕಾಕೂ, ಕೂಕಾ'

ತಂಗೊಳತಳ ಬರಿದು ಬರದ ಗದ್ದೆಯಂತೆ ಕಿಸಿಯುತ್ತಿದೆ,
ಬಾಯ್ಬಿಟ್ಟಿದೆ ಮೋಡಕೆ.
ಒಣಗಿದ ತಾವರೆದಂಟಿನ ಸುತ್ತ ಸತ್ತ ಮಧುಪಾಳಿಯ
ರೆಕ್ಕೆ ಮಣ್ಣು ತಿನುತಿದೆ ;
ಅದೋ ಅಲ್ಲಿ ಅರಸಂಚೆಯ ಕೊಕ್ಕು, ಪುಕ್ಕ. ಅದೊ ಕಾಲು;
ಬೃಂದಾವನದಟ್ಟೆ ಕಂಡು ನಡುಗುವುದೇ ಕೈಕಾಲು ?
ತಡೆ.

ಅಲ್ಲಿನ ಆ ಬೋಳು ಬಳ್ಳಿಮನೆ ಕಂಕಾಲದ ಪಾಚಿಗಲ್ಲ ಮೇಲೆ
ಹೋಗಿ ಕುಳಿತುಕೊ.
ಮುಚ್ಚು ಕಣ್ಣು, ತೆರೆಯಬೇಡ.

೨

ಶ್ಯಾಮತಮಾಲಚ್ಛಾಯೆ ;
ವ್ಯೆಚಾಚಿದೆ ಚಂದ್ರಿಕಾಮಾಯೆ.
ಮಸುಕುತಾರೆ ತಿಂಗಳಲ್ಲಿ ಬೇಯೆ,
ಕಸಕುಗಾಳಿ ಕಸಿವಿಸಿಗೆದೆ ಸೀಯೆ,
ಸುತ್ತುವ ಮುತ್ತುವ, ಎಲೆಸೆರಗೆತ್ತುವ
ಸಮೀರ ಸಂತತ ಹಾಯೆ ;
ತಾರೆ ತೀರದಲಿ ಮರಿಮುರಿ ಮೋಡ
ಬೆಳಕುಚಿಮುಕಿನಲಿ ತೋಯೆ ;
ದಡದ ಕದಕೆ ಕೈಹಚ್ಚಿ ಯಮುನೆ ನಿಶ್ಶಬ್ದ ನಿಂತು ಕಾಯೆ ;
ಬೆಳ್ಳಿಮುಲಾಮನು ತೊಟ್ಟು ಮರವ್ರಗಿಡ ಬಳ್ಳಿ ಕುಣಿದುತಲೆಯೊಲೆಯೆ ;
ದಿಗಂತದಾಚೆಗು ಸ್ವಪ್ನಮಾದಕ ಜ್ವಾಲೆಜಾಲ ಆಲೆಯೆ ;
ತುಟಿಯ ಕಚ್ಚಿ ಮಾಧವಿ ನಸುಸುಯ್ಯೆ,
ಕಣ್ಣ ಮಿಟುಕಿಸಿತು ತಾರೆ.
ದಟ್ಟ ನೆಳಲ ಆ ಕುಂಜ ಖಂಜರಿಗೆ
ತಾಗಿತಾರ ಬೆರಳು ?
ಹುಲ್ಲು ನಿಮಿರಿ ಎಳ ಗಾಳಿ ತತ್ತರಿಸಿ
ಬಾನಿಗೆಲ್ಲ ಬೆರಗು.
ಯಾರ ನಿಟ್ಟುಸಿರ ಬೇಗೆ ಹಬ್ಬುತಿದೆ ವನವನ ಕುಂಜ, ನಿಕುಂಜ ?
ಯಾರ ಅಂದುಗೆಯು. ಸೊಂಟಗಂಟೆಗಳ ಕಿಣಿಕಿಣಿ ಗಣಗಣ ನಾದ ?
ಬೆಳುದಿಂಗಳ ಮಂಗಳ ರಂಗಸ್ಥಳದಲ್ಲಿ ಬಳೆಗಳುಲುಹು ;
ಧಿಮಿಧಿಮಿತದ್ಧಿಮಿ ತಾಳ ತುಡಿಯುತಿದೆ, ಅಗೋ ರಂಗನೊಲವು !

೩

ಅಯ್ಯೊ ನಾಟಿತು ಬಾಣ ; ಗುಹೆಗುಹೆಗಳನು ಬಗೆದು
ಕುಂಜಕುಂಜಗಳಲ್ಲಿ ಹೊಕ್ಕುಹೊರಟು ;
ಮರಮರಕೆ ತಾಗಿ, ತಂಗೊಳದಲ್ಲಿ ಮುಳುಗಿ, ಹೂ
ಹೂವುಗಳ ಕಂಪಿನಲಿ ಬೀಗಿ ಮಾಗಿ

ಬಂತು ಬಿದುರಿನ ಬಿರುಕಿನಿಂದ ಅಲೆಅಲೆ. ತಂತಿ
ಮಿಂಚುತಾಗಿತು ನರವ, ರಕ್ತಕಣವ.
ಪಾತಾಳಗರುಡಿ ಸರಸರನಿಳಿದು ತಳತಳವ
ತಾಗಿ ಸೋಸಿತು ಸಹಜಪಂಕಪುರವ.

ಬೀಸಿ ಬಂದಿತು ಪ್ರಳಯವಾತ ; ಸುಯ್ ಸುಯ್ ಎಂದು
ಸೂಸಿ ಬಂದಿತು ಮಲಯ ಗಂಧಾನಿಲ ;
ತೊಳಲಿ ಬಂದಿತು ಹಕ್ಕಿಮರಿ ಪುಕ್ಕಗರಿಕೆದರಿ,
ಮರಿಮೋಡ ಕಣ್ಣುಮುಚ್ಚಾಲೆಯಾಡಿ.

ಕೊಲುವ ದನಿ, ಕೊಂದು ಬದುಕಿಸುವ ದನಿ ; ಸಾವೆನಂ
ಬಾಸೆ ಕೆರಳಿಸುವ ಜೀವೋತ್ತರ ದನಿ ;
ನಿಲುವ, ನಿಲಿಸುವ, ಕೂರಿಸುವ, ಆಡಿಸುವ, ಅಟ್ಟಿ
ಅಳಲಿಸುವ ಒಲವಿನುದ್ವೇಗ ಮುರಳಿ.

ಮಿಂಚು ತುಳುಕಿತು ಮನದ ಅಂಚಿನಲಿ, ಚುಂಚಿನಲಿ
ಚುಂಚವಿಟ್ಟಾಡಿತ್ತು ವಿಹಗಮಿಥುನ.
ಗೊಂಚಲಲಿ ಹೂವು ಕಂಪೊಸರಿತ್ತು, ದಗಧಗ ಎಂದು
ಬೆಂಕಿ ಭುಗಿಲೆದ್ದಿತ್ತು. ಮನ ವಿಮಾನ.

ಕೊಳಲ ದನಿಯೊಡನಗೋ ಬಂದ ಮೋಹನ, ಬಾಲ
ಕೃಷ್ಣ ರಾಧೆಯ ಹೃದಯನಂದನಕ್ಕೆ.
ಕೂಗಿತ್ತು ಕೋಕ, ಪಲ್ಲವಿಸಿತ್ತಶೋಕ, ಮೈ
ಮರೆತು ನಿಂತಳು ಯಮುನೆ ಮೂಕ, ಮೂಕ.

ಇರುಳ ದೋಣಿಯ ಮೇಲೆ ಹುರುಳು ಹಾಡಿನ ಹಾಯಿ ;
ತಿಂಗಳಿನ ತೆರೆನೊರೆಯ ಶುಭ್ರಹಾಸ.
ಪ್ರಾಣಪಕ್ಷಿಯ ರೆಕ್ಕೆ—ಜ್ಞಾನಗೋಪುರ ಹಕ್ಕೆ—
ಆಚೆ ದಡದೆಡೆ ಸದಾ ತುಯ್ಯುತಿರಲಿ.

# ಭೂಮಿಗೀತ

ಹುಟ್ಟು :

ಮಲೆಘಟ್ಟ ಸೋಪಾನಕೆಳಪಟ್ಟಿಯಲಿ ;
ಉರುಳು,–ಮೂರೇ ಉರುಳು,–ಕಡಲ ಕುದಿತದ ಎಣ್ಣೆಕೊಪ್ಪರಿಗೆಗೆ.
ತೆಂಗುಗರಿಗಳ ಬೀಸಿ ಕೈಚಾಚಿ ಕರೆದಳು,
ಆಡಿಕೆಗೊನೆಗಿಲಕಿ ಹಿಡಿದಾಡಿಸಿದಳು.
ಕಬ್ಬಿನಾಲೆಯ ತಿರುಪಿನಲ್ಲಿ ಕುಳಿತೆರೆದಳು ಅಜಸ್ರಧಾರೆಯ ಕರುಳತುಡಿತವನ್ನು ;
ಭತ್ತ ಗೋಧುವೆ ರಾಗಿ ಜೋಳ ಮೊರಮೊರವೌರಿಯಲ್ಲಿ ಮಾಂಸದ
ಹಾಡನೂಡಿಸಿದಳು
ಗಂಟಿ ಗೋರಟೆಜಾಜಿ ಮಂದಾರ ಮಲ್ಲಿಗೆಯ ಗಂಧಗಿರಿಶಿಖರದಲಿ
ಮಲಗಿಸಿದಳು ;
ಹಕ್ಕಿಗೊರಳಿಂದುಗುವ, ತುಂಬಿ ಮರ್ಮರವೊರೆವ, ಜಾಮೂನುನಾದದಲಿ
ಜಾಳಿಸಿದಳು
ಆಕಾಶದಲ್ಲಿ ಮೋಡದ ವಿಶ್ವರೂಪಕ್ಕೆ ಕೆಳಗೆ ಜೀವಜ್ಯೋತಿ ಕೂಡಿಸಿದಳು

ಎಳಹರೆಯ :

ಹಾಡಿಯಲಿ ಮರಮರದ ಕೆಳಗೆ ಧೂಪದ ದಟ್ಟಕಾಯಿ ಚಿಗಿತೆಳಮೊಳಕೆ,
ನರಳು, ಕೇಕೆ ;
ಮಳೆಮಂತ್ರದಂಡ ಮುಟ್ಟಿದ ತಿಟ್ಟುನಿಟ್ಟಿನಲಿ ನೆಲವೆಲ್ಲ ಮೊಳೆ, ಮೊಳಕೆ,
ಕೊನರು, ಸಸಿ, ಗಿಡ, ಹುಲ್ಲು;
ತೋಟಗೋರಟೆಗೆ ಮೈಯೆಲ್ಲ ಕಾಮನಬಿಲ್ಲ ಬಲ್ಬು ಮಾದಕದೀಪ,
ಚೆಲ್ಲು, ಗುಲ್ಲು.
ನಂದಬಟ್ಟಲನೆತ್ತಿ ತುಟಿಗಿಟ್ಟು ನರ್ತಿಸಿತು ಅಂದುಗೆಯನಾಡಿಸುತಬಂದ ಭೃಂಗ ;

ಹಿತ್ತಲ ಜಗಲಿಮೇಲೆ ಕುಳಿತು ಧುಮ್ಮಿಕ್ಕಿದೆನು ಕೆಳಗೆ ಮತ್ತೂ ಕೆಳಗೆ
ತಳಕೆ ಕುಂಗ.
ಹಸುರುತೆರೆ ಅಪ್ಪಳಿಸುತಿರೆ ಮೇಲೆ ನೊರೆಕಾರಿ, ಬೀಸುತಿರೆ ಬಿರುಗಾಳಿ,
ಗುಡುಗು ಮೊಳಗೆ ;
ತಳದಾಣಿಮುತ್ತುಗಳ ಮತ್ತದೀಪ್ತಿಗೆ ಕಣ್ಣು ಕುಕ್ಕಿ ಕುರುಡಾಡಿದೆನು
ಸಂಜೆವರೆಗೆ–
ಬುಂಡೆಗಂಟಿದ್ದ ತುಟಿ ಕಿತ್ತರೂ ಕಲ್ಪನೆ ಹೆಂಡಹೊಂಡದ ಸೆಲೆಯ
ಹುಡುಕುತಿತ್ತು.
ಬೇಲಿಮೇಗಡೆ, ಗದ್ದೆಯಂಚಲ್ಲಿ, ತೋಪುಗಳ ಅಂಗುಲಂಗುಲದಲ್ಲಿ
ತೋಟದೊಳಗೆ
ಎಲ್ಲೆಲ್ಲು ಹೆರಿಗೆಮನೆ : ಬೇನೆ ಸಂಕಟ, ನಗೆ ; ಕೊರಡು ಚಿಗುರಿದ
ಚೆಲುವು, ಚೀರು, ಕೇಕೆ.
ನರ್ಸುಗಳು ಡಾಕ್ಟರರು ಹೆರಿಗೆಮನೆಯೊಳಹೊರಗೆ ;
ಅವರ ಬೆನ್ನಿಗೆ ಸದಾ ನಾಲ್ಕು ಮಂದಿ ;
ತೊಟ್ಟಿಲಂಗಡಿಯಲ್ಲಿ ಬೊಂಬು ತುಂಬಾ ಅಗ್ಗ ;
ಜಾತಕರ್ಮಾದಿ ನಿರತ ಈ ಪುರೋಹಿತಭಟ್ಟ ಅಪರಪ್ರಯೋಗದಲಿ, ಪಾರಂಗತ.
ಮರಿಮರಿಯ ಹೊರೆಹೊರೆಗಳಾಡಿದುವು ಮಣ್ಣಿನಲಿ,
ಹೊಟ್ಟೆಹೊಸೆದುವು ಜಾರುತೊಗಟೆಯಲ್ಲಿ ;
ರೆಕ್ಕೆ ಬಡಿದುವು ಶೂನ್ಯ ಬೀದಿಯಲಿ, ಚಪ್ಪಾಳೆಯಿಕ್ಕಿ ಕುಣಿದುವು
ಮೋರಿಮೋರಿಯಲ್ಲಿ–
ಮಧ್ಯಾಹ್ನದುರಿಬಿಸಿಲು ಹೆತ್ತ ಹೆಣಬಣಬೆಗೂ ಪಾಚಿಗಟ್ಟಿದ ಜಗಣೆ–
ಜೀವ ಹಲವು.
ಆಹ, ಪ್ರಾತಃಕಾಲದಲ್ಲಿ ಬೆಳಕಿನ ದಾಹ :
ಯಮುನಾಂಭದಲ್ಲಿ ಕಾಳಿಂದಿ ಹೆಡೆಮಣೆಯಾಟ.
ಕದಕದಕೆ ಕಿಟಕಿ ಕಿಟಕಿಗೆ ಕಣ್ಣು, ಮನೆ ಕಣ್ಣು, ಊರೆಲ್ಲ ಕಣ್ಣು, ಕಾಡೆಲ್ಲ
ಕಣ್ಣು :
ತಿರುಗಿತ್ತು ಮಗುವಾದರಿಯ ಕ್ಯಾಮರಾ ಕಣ್ಣು ;

ರೀಲುರೀಲನು ಜಡಿದು ಗಿಡಿದ ಕತ್ತಲೆ ಕೊಠಡಿಮೇಲೆ ಮಸ್ಲಿನ್‌ಪರದೆ
ಹಾಸುತಿತ್ತು.

ಒಳಹೊರಗುಗಳ ಅಳಿವೆಯಲ್ಲಿ ಮೊರೆವ ತರಂಗಮಾಲೆಯಲಿ
ಮುತ್ತು, ಬಂಗಾರ, ಹೀರಕ, ಪುಷ್ಯರಾಗ, ಗೋಮೇಧಿಕ, ಕೆಂಪು, ಹಳದಿ.
ಎಲ್ಲಿ ಬಿದ್ದರೆ ಅಲ್ಲಿ ಅಲ್ಲಿ ನಾಗರ ಬಂಧ; ತುಟಿಗಗಸ್ತ್ಯಧರದ ತುರುಸುತೋಟಿ;
ಕಣ್ಣು ಬಿಟ್ಟರೆ ಬಣ್ಣಬಣ್ಣ ಗೊಗ್ಗರು ಗಲಭೆ ; ಕಿವಿತುಂಬ ಹಸುರು, ಬಿಳಿ,
ಹಳದಿ, ಕೆಂಪು.

ಹಣೆಗೆ ತುಪ್ಪವ ಹಚ್ಚಿ ಬಿಟ್ಟ ಬೆಕ್ಕಿನ ತರಹ ಬುಗುರಿ ತಿರುಗಿದೆ ಬಾಲ
ನಿಮಿರಿಸುತ್ತ :
ತಾಯಿಗೂ ಮಿಗಿಲಾಗಿ ಎದೆಗವಚಿಕೊಂಡಳೋ ;
ತಿರುತಿರುಗಿ ತನ್ನ ಬಸಿರಲ್ಲಿಟ್ಟು ನವೆದಳೋ ;
ಹಕ್ಕಿಕೊರಳನು ಹಿಚುಕಿ ಲಾಲಿ ಹಾಡಿದಳು ;
ಸಸಿಕೊರಳ ಕೊಯ್ದು ತಿಂಡಿಯನು ತಿನಿಸಿದಳು.

ಪ್ರೇಮ ಧೃತರಾಷ್ಟ್ರನಪ್ಪಿಗೆ ಭಗ್ನ ಬಲಭೀಮ : ಎಲ್ಲು ಕೃಷ್ಣನ ಕಾಪು
ಕಾಣಲಿಲ್ಲ.
ಇವಳೆದೆಗೆ ಬೇರಿಳಿದ ಕಾಲು ನನ್ನದು ; ಬರಿದೆ ನಕ್ಷತ್ರಲೋಕಕ್ಕು ರೈಲು ಬಿಟ್ಟೆ.
ಹೆಂಕುಳಿಯ ಹಾಗೆ ನಸರತ್ತು ಹುಡುಕಿದೆ ಮನದ ಬಚ್ಚಲಲಿ ಕೊನೆಯಿರದ
ಕೊನೆಯ ಬಟ್ಟೆ.

ಈಡಿಪಸ್ಸಿನ ಗೂಢ ಪಾಪಲೇಪಿತ ನಾನು
ಟ್ರ್ಯಾಕ್ಟರನ್ನೇರಿದೆನು ; ಉತ್ತೆ, ಸಿಗಿದೆ.
ಬಿತ್ತಿದೆನು, ಬೆಳೆದೆ ಆಟಂಬಾಂಬು ಕಾಳುಗಳ ,
ಮಾರಕಕ್ರಿಮಿಪೈರ ಗೋರಿ ನಲಿದೆ.

ಕರೆಯುವುವು ಮತ್ತು ಮತ್ತೂ ಬಾನ ಹಕ್ಕಿಗಳು ;
ಗಾಳಿಪಟಬಾಲಗರು ಮತ್ತೆ ಕರೆಯೋಲೆ ;

ಕಿವಿಸುತ್ತ ಬಂದು ಕರ್ಣಪಿಶಾಚಿ ಪಿಸುಗುಟ್ಟಿ ಕಾಡಿದುವು ಮೇಲೆ, ಮೇಲೆ.
ಮಂತ್ರವಾದಿಯ ಕುತಂತ್ರದ ರಗಳೆ ಜೋರಾಗಿ ರೇಗಿದೆನು ನಾ ಬರಿದೆ ನನ್ನ
ಮೇಲೆ ;
ಛಿಕ್ಕಿ ಹೊಡೆದೆನು ಪಂಜರದ ಕಂಭ, ಮಾಡಕ್ಕೆ ;
ಚೀರಿ ಬಡಿದೆನು ರೆಕ್ಕೆ, ಕುಕ್ಕಿ ಪುಕ್ಕವ, ಕಿತ್ತು ರಾಶಿ ಹಾಕಿದೆ ಶಿಂಡಿಶಟ್ಟೆಯೊಳಗೆ

೨

ಮರಿಕುದುರೆ ಕೆನೆದು ಕುಣಿದಿತ್ತು ; ಸುತ್ತಲು ಹುಲ್ಲು, ಹುರುಳಿ ;
ಬಂಗಾರದ ಕಡಿವಾಣ, ರನ್ನಲಗಾಮು ;
ತಲೆಮೇಲೆ ಮೂರು ಬಣ್ಣದ ಮಕುಟಗರಿ ಬೆಡಗು ;
ಹಿಂದೆ ಕರಕರಕಟರು ಷಾಃಪಸಂದಿನ ತೊಡವು.
ನಡಮುರಿವ ತನಕ ನಡದದ್ದೆ ಸುಗ್ಗಿಯ ಕುಣಿತ.
ಆ ಬಳಿಕ :
‘ ಮೈಯೆ ಭಾರ, ಮನವೆ ಭಾರ ’
ತ್ತಾತ್ತಿ ಕಿಟೋ ತಿಮ್ಮಣ್ಣಾ,
ಅತ್ತೆಮನೆಗೆ ಸೊಸೆ ಹೋಗುವುದ್ಹ್ಯಾಂಗೋ ತಿಮ್ಮಣ್ಣಾ ?
ತಿರುಪತಿ ತಿಮ್ಮಪ್ಪನ ಪಾದವೇ ಗತಿ ಅಣ್ಣಾ.
‘ ಕಾಸು ಕೊಟ್ಟವರಿಗೆ ಕೈಲಾಸ ತೋರ್ಪಳು ಈಚಲ ಮಠದವ್ವ, ನಮ್ಮವ್ವ.’
ವೇದ, ಶಾಸ್ತ್ರ, ಪುರಾಣ, ಭಜನೆ, ಹರಿಕಥೆ–ಪೂಜೆ ;
ಎಣ್ಣೆ ತೀರುತ್ತಲಿರೆ ಒಡಕು ಹಣತೆಯ ಮುಂದೆ ಬತ್ತಿ ಹೊಸೆತ.
ಆಗಲೂ ಬಿಡಳಿವಳು ತಾಯಿ ; ಮೆಣಸಿನಕಾಯಿ ಹೊಗೆ ಹಾಕಿ
ತುರಿಯುವಳು ಎದೆಯ ಗರಟೆ.
ಬಿದಿರುಮೇಣೆಯ ಮೇಲೆ ಕುಳಿತು ಸಾಗುವ ವೇಳೆ–ಹೊರಬರಳು ;
ಅವಳಿಗಿನ್ನೊಂದು ಹೆಂಗೆ.

೩

ನೆಲತಾಯ ಮಾಯಕದ ಅರಗಿನರಮನೆಯಲ್ಲಿ
ಹಸ್ತಿನಾಪುರದ ಸ್ಮೃತಿ ಹೊತ್ತಲಿಲ್ಲ.
ಮಯನಿರ್ಮಿತವೊ, ಸುಯೋಧನರಚಿತವೋ ಅಂತು ಕಡ್ಡಿ ಗೀರುವತನಕ
ಶಂಕೆ ಇಲ್ಲ.

ನಾನಲ್ಲಿ ನಲಿದೆ ; ನುಣ್ಣನೆ ನೆಲದಿ ಜಾರಿದೆನು ;—
ಹೊರಜಗಲಿಯಿಂದ ಒಳಮನೆಯ ಕತ್ತಲೆವರೆಗೆ–

"ಯಾರು ನಿಂದವರಲ್ಲಿ ? ತಾಯೆ ?" ಎಂದೆ
"ತಾಯಿ ? ಏನೀ ಭ್ರಾಂತಿ ? ಹೋಗು, ಪೆದ್ದೇ !"
"ಚಂಡಿ, ಚಾಮುಂಡಿ ಪೇಳ್, ಬೇಕಾದುದೇನು ?"
"ಗಂಡುಸಾದರೆ ನನ್ನ ಬಲಿಕೊಡುವೆಯೇನು ?"

ಇವಳ ಹೊಟ್ಟೆಚರಂಡಿಗಾರು ಕುಕ್ಕಿದರಯ್ಯ, ಕಳ್ಳಬಸುರಿನ ಯಾವ
ಜಾಣರಂಭೆ ?
ಗಂಗೆಯಲಿ ತೇಲಿ ಬಂದನು ಕರ್ಣ, ರಾಧೇಯ ; ಸಾಯಿಸಲಿಕಲ್ಲದೇ ಬರಳು
ಕುಂತಿ.

ಮೈಯೆಲ್ಲ ಹೆರಿಗೆಮನೆಮಸಣ ಇವಳಿಗೆ, ಸ್ವರತಿಸಂಪ್ರೀತೆ ;
ಹುಲಿ, ಚಿರತೆ, ಆನೆ, ಹಸು, ಆಡು, ಕೋಡಗ, ಕತ್ತೆ ;
ಮಾವು, ನೇರಿಳೆ, ಹಲಸು, ಜಾಲಿ, ಜಾಜಿ—
ಇವು ಇವಳ ಸಹಜಸಂತಾನ ;
ಈ ಪೆಡಂಭೂತ ನಾ ಬರುವ ಗಳಿಗೆಯೊಳೀಕೆಗೇಕೆ ಹುಟ್ಟಿತೋ ವಿಷಮ–
ರತಿ ದುರಾಶೆ !

ಬಿಟ್ಟರೋ ಕಾಡಲ್ಲಿ ಕಣ್ಣು ಕಟ್ಟಿ ;
ಸುತ್ತಲೂ ಬಿಗಿದಿಟ್ಟು ಮುಳ್ಳುತಂತಿ.

ಕುಡಿಯಲುಪ್ಪಿನ ನೀರು ; ತಿನಲು ಬೆಂಕಿಯ ಚೂರು ;
ಕುಣಿಯಲೆಂದೇ ಬೇಡಿ ಕಾಲ ತೊಡವು.
ಆಗಂತುಕನು ನಾನು ಅತಿಥಿಸತ್ಕಾರಕ್ಕೆ ಸಾಗಿ ಬಂದರು ಆಳು ಮಂದಿ ಸಖರು ;
ಉರಿವ ಮೇಣದ ಬತ್ತಿ ; ಸುತ್ತ ಮೇಣದ ಗಡ್ಡೆ ಹೊಳೆ ;
ಬತ್ತಿಯೂ ಕೊನೆಕೊನೆಗೆ ಕರಕು, ಕರಕು.

ನೆಲತಾಯಿ ಮಲತಾಯಿ.
ಉತ್ತಾನಪಾದನಿಗೆ ಸುರುಚಿ ; ಧ್ರುವನಕ್ಷತ್ರಕ್ಕೆ
ಕಾಡಮೂಲಕವೆ ಪಥ ಆಗಸಕ್ಕೆ.
ಆರಣ್ಯಕರ ಮೌನಮಂತ್ರ ಬಿಚ್ಚಿದ ಬಟ್ಟೆ.
ತೆಗೆದುಕೋ ನೀ ಕೊಟ್ಟ ಎಲ್ಲ ವಸ್ತ್ರವಿಲಾಸ :
ಈ ಕೋಟು, ಈ ಶರಟು, ಈ ಶರಾಯಿ ;
ಈ ಭಗ್ನ ಜೋಪಡಿಯು ನಿನ್ನದೇ ; ತೆಗೆದುಕೋ ;
ಬತ್ತಲಾಗದೆ ಬಯಲು ಸಿಕ್ಕದಿಲ್ಲಿ.
ಅಲ್ಲದಿರೆ ಬೀದಿಯಲಿ ನಾ ಸರೀಕರ ಕೂಡೆ ತಲೆಯೆತ್ತಿ ನಡೆಯಲಾರೆ ;
ಬತ್ತಲಾಗದೆ ಕತ್ತಿ ಕಿತ್ತೆಸೆಯ ಬಲ್ಲುದೇ ಕವಚಕುಂಡಲ ಹೃದಯದಮೃತ–
ಕಲಶ ?

೪

ವಿಶ್ವಾಮಿತ್ರ ಹೇಳಿದ : "ತ್ರಿಶಂಕು, ನಡೆ ಸ್ವರ್ಗಕ್ಕೆ."
ತೊಗಲು ಬಾವಲಿ ಮರದ ಜೋಲುತೊಗಟೆ.
ಕೆಸರಲ್ಲಿ ಹುಗಿದ ಕಾಲನ್ನು ಕೀಳುವುದೆಷ್ಟು ಕಷ್ಟ ಅಷ್ಟೇ ಕಷ್ಟ–
ಆಕಾಶಪಂಜರದ ಹೊನ್ನ ಸರಿಗೆಯ ನಡುವೆ ನಡೆವ ಹಗರಣ ಕೂಡ.
ಕೆಸರೋ ಅಸಹ್ಯ ; ಹುಟ್ಟಿದ ಕೂಡಲೆ ಕೊಳೆವಎಳಕಸದಪಸ್ಮಾರ ಬಾಲಲೀಲೆಯ
ಚಟ್ಟ–.

ಮಣ್ಣು, ಪೂರಾಮಣ್ಣು ಬೊಂಬೆಯಯಾಗಿದ್ದರದು ಒಂದು ತೆರ ;

ಈ ಬೊಂಬೆಯಲ್ಲು ಉಸುರಿನ ತಂತ್ರ ;
ತಂತ್ರದಾಚೆಗೆ ಶುದ್ಧ ಬೆಳಕುಮಂತ್ರ–ಫಿತೂರಿ.
ಹೆಜ್ಜೆಮೂಡದ ಹಾದಿ ಗಾಳಿಬೀದಿ.

ಇದು ನೋಡು, ಇದು ಕಷ್ಟ : ಧೂಳು ಧೂಳಿಗೆ ಸೇರಿ,
ಗಾಳಿ ಗಾಳಿಗೆ ಕೂಡಿ,
ಬೆಂಕಿ ಬೆಂಕಿಯ ಕೂಡಿ,
ಗಾಳಿಯಲ್ಲುಲುಹು, ಆಕಾಶದಲ್ಲಾಕಾಶ ಬೆರೆತು ಹೋದರೆ ಇದಕ್ಕೇನು ಧಾಡಿ ?

ಏನೊ ಉಳಿವುದು ಮತ್ತೆ :
ಒಂದು ವಿದ್ಯುತ್ತ್ರಾಂತಿ–
ತಾರೆ ನೀಹಾರಿಕೆಗಳಾಚೆಯ ಸಮಾಚಾರ ;
ಪಾತಾಳದಾಳದಿಂದೆದ್ದು ಬರುವ ವಿಕಾರ ;
ಒಂದನೊಂದಕೆ ಕೂಡಿಸಾಡಿಸುವ, ಕುಣಿಸುವ ಚಮತ್ಕಾರ.
ಕೆಲರು ಹೇಳುವರು ಸ್ವಿಚ್ಚೆಲ್ಲೋ ತಿಳಿಯದೆಂದು ;
ಮೂಲದ ಕಛೇರಿಯ ವಿಳಾಸ ಮರೆತಿದೆ ಎಂದು ;
ಇಲ್ಲೆ ಎಲ್ಲೋ ಇರುವುದೆನ್ನುವರು ಉಳಿದವರು.

ಕತ್ತಲಲ್ಲಿ, ಕಣ್ಣು ಕಾಣದ ಬೀದಿಯಿಕ್ಕಟ್ಟಿನಲಿ
ಗೋಡೆ ತಡಕುತ ಇನ್ನು ತೆವಳಬೇಕು.
ಹೆಳವನ ಹೆಗಲ ಮೇಲೆ ಕುರುಡ ಕೂತಿದ್ದಾನೆ;
ದಾರಿ ಸಾಗುವದೆಂತೊ ನೋಡಬೇಕು.

ಆಗಸ್ಟ ; ೧೯೫೪.

# ಹಳೆಮನೆಯ ಮಂದಿ

ರಾಜಮಾರ್ಗದ ಮೇಲೆಯೇ ಸುಪ್ರಸಿದ್ಧ ಮನೆ.
ಕಾಡ ಕುಡುಬಿಯೂ ಕೂಡ ಬಲ್ಲ ಇದರ ವಿಳಾಸ.
೧೯೨೦ ರದ್ದು ಮಾದರಿ.
ಭದ್ರ ಬುನಾದಿ–ಕಾಂಕ್ರೀಟು.
ಗೋಡೆ, ಮಹಡಿಮಾತ್ರ ಕಾಲಾವಧಿಯ ಕಂತ್ರಾಟು.
ದೊಡ್ಡ ಲಾಂದ್ರದ ಕಂಭದೆದುರಿಗೇ ಇದೆ ಹೆಸರು–ಹಲಗೆ ;
ಪ್ರತಿದಿನ ಹೊಸತು ಬಣ್ಣ, ಹೊಸ ಥಾಟು.
ಅಲ್ಲೆ ಚಕ್ರವ್ಯೂಹದಿನದ ಸಂಜೆಯ ಜಯದ್ರಥ ಮಹೋನ್ನತ ಗೇಟು.
ಎದೆಯ, ಕರುಳಿನ ಚಿತ್ರವೈಚಿತ್ರ್ಯ ಕೆತ್ತಿರುವ
ಕಿಸುಬಾಯಿ ಪಾಗಾರ.

ಒಳಗೆ ಹೂದೋಟದೊಳತೋಟಿ,
ಗಿಡಗಿಡಕು ಪೈಪೋಟಿ :
–ಮುಗುಳಾಗಲೋ, ಇಲ್ಲ, ಅರಳಾಗಲೋ ?
ಹಣ್ಣಾಗಲಿಕ್ಕೆ ಇಲ್ಲ ಧವಪ್ಟು ಪುರುಸೊತ್ತು.
ಗಾಳಿಯಲ್ಲೆಲ್ಲ ದುಂಬಿಗಳ ಸತತ ಕವಾತು ;
ಕೋಗಿಲೆಯ ಕಹಳೆ, ಶಿತುತ್ತೂರಿ, ನೌಬತ್ತು,
ತೋಟದ ನಡುವಿನಲ್ಲಿ ಅಪರಂಜಿ ಪಂಜರದಿ
ಅನ್ನ ತಿನ್ನುವ ಮಂಜನುಗಿವ ಅನುಭಾವದರಗಿಣಿ :
"ಮಾತಾಡೋ ರಾಮಪ್ಪಾ, ರಾಮಪ್ಪಾ, ರಾಮಪ್ಪಾऽऽऽ"

ಕೇಳಿದ್ದೆ ಈ ಮನೆಯ ಬಗೆಗೆ ನೂರಾರು ಕತೆ ;
ಹಳೆಮನೆಯ ವಹಿವಾಟು ಎಲ್ಲ ಬಹಳ ಸಲೀಸು,
ಹಳೆಗಂಡಹೆಂಡಿರೊಡನಾಟ ಕೂಟದ ಚಟದ ಚುರುಕು, ತುರುಸು.

ಬಿಗಿತತಿಕ್ಕಾಟಸುಖ ಸೊನ್ನೆ. ಆದರೂ
ಸಾರಿಗೆ ಸುಸೂತ್ರ : ಹಾಗೂ ಸರಳ, ನಿರಪಾಯ.
ಟಪ್ಪಾಲು ಪೆಟ್ಟಿಗೆಗೆ ತುರುಕಿದ ಲಕೋಟೆ ಚಕ್ ಚಕ್ ಎಂದು,
ಭೋಂ ಭೋಂ ಎಂದು, ಜುಗುಜುಗು ಎಂದು
ನೂರಾರು ಮೈಲಿ ನಡಯಿಸಿ ಕೂಚು ಗುರಿಮುಟ್ಟಿ ಹೊಡೆವುದು ಸಲಾಮು !

೨

ಮುಟ್ಟಿದರೆ ತೆರೆಯಬಹುದಿದರ ಬಾಗಿಲು ;
ಬಾಗಿಲಾಚೆ ಬೆಳ್ದಿಂಗಳಿನ ಕುಕಿಲು;
ಬೀಸುಬಗೆ, ಚಾಚುತೋಳಿನ ಸೂಜಿಗಲ್ಲ ಸೆಳೆ.
ಆರಾಮಖುರ್ಚಿ ಒಳಗಡೆ, ದಿಂಬು, ಸೋಫಾ, ತೂಗುಮಂಚ,
ಕಾಫಿಕೊಳಾಯಿ ;

ಮಿಂಚು ಬೀಸಣಿಗೆ. ಹಿತಮಿತ ಗಾಳಿ,
ಮಾತು ಬ್ಯಾಡ್ಮಿಂಟನ್ನಿನಾಟ ಒಂದರೆ ತಾಸು.
ಮತ್ತೆ ಹೃದಯುದ ಸುತ್ತಲೂ ಸುಖೋಷ್ಣಸ್ಪಂದ,
ಕೈಕುಲುಕು, ಎದೆಝಳಕು;
ಕಣ್ಣ ತುದಿಯಲ್ಲಿ ಕರುಳಿನೊಂದು ತಿರುಗಣೆತಿರುಪು;
ಮುಂಜಾವದೆಳತಳಿರ ಮೇಲೆ ಆಕಾಶರಾಯನ ಕಣ್ಣ ಹನಿಹೊಳಪು–
ಹೀಗೆ ತಿಳಿದದ್ದು ಅದು ನನ್ನ ಮೊದಲನೆ ತಪ್ಪು !
ಅಡೆಗಿಟ್ಟು ಜಡಿದರೆಂಥಾ ಕಾಯೆ ಇರಲಿ, ಕೊನೆಗಾದರೂ ಕಳಿತು,
ಹುಳಿ ಹಿಂಗಿ ಸಿಹಿಯಾದೀತೆಂದು

ಭ್ರಮಿಸಿದ್ದೆ.
ನೋಡಿದರೆ
ಈ ಎಲ್ಲ ಮಂದಿ ಈಜಿಪ್ತ್ತಮಮ್ಮಿಗಳಂತೆ ಮುರುಟಿ, ಸುರುಟಿ, ಉಪ್ಪೂರಿ
ಆಗಿವೆ ಗನಾದು ಉಪ್ಪಿನ ಕಾಯಿ.

ಹುಳಿ, ಒಗರು, ಖಾರ–ಈ ಮೂರನ್ನು ಬಿಟ್ಟರಿನ್ನಾವ ರಸವಾದರೂ
ಈ ಮಂದಿಗಿರಬೇಡ ?
ಮಿಡಿ ಹೊರಗೆ ಸೊನೆಯುಗುಳಿದರೆ ಇವಕ್ಕೆ ಒಳಗೆಲ್ಲ ಬರಿ ಸುಡು ಸೊನೆಯೆ !

೩

ಬಾಗಿಲ ಬಳಿಯೆ ಗಸ್ತು ಹೊಡೆಯುವುವು ನಾಲ್ಕಾರು
ವಂದಿಮಾಗಧ ನಾಯಿ.
ಬಾಗಿಲೊ ? ಅಹಂಕಾರ ಸಂಧಿವಾತದ ಯಾತ.
ನಜರು ಹಿಡಿದರೆ ಮಾತ್ರ ಇಲ್ಲಿ ಯಾತಾಯಾತ.
ಹಾಗೂ ಹೀಗೂ ಪಾಸುಗಿಟ್ಟಿಸಿ ಒಳನುಗ್ಗಿದರೆ
ಹೂ, ಬೆಣ್ಣೆ, ಜೇನು–ಇವು ಕೊಂಚ ಹಳಸುವ ನಾತ ;
ಲೋಭಾನ, ಪುನುಗು, ಜವ್ವಾಜಿಗಳ ಮುಸುರೆಯಲ್ಲುಸುರು ಕಟ್ಟಿದ ಗಾಳಿ.
ಗೋಡೆ ಮೇಲೆಲ್ಲ ಮಾಸಿದ ಪ್ರಕೃತಿಚಿತ್ರಗಳ ಪಟಪಟದ ಪರದಾಟ.
ಒಳಗೆಲ್ಲೊ ದರ್ಶನದ ಗಣಿಕುಣಿದು ಮುಲುಕುತಿದೆ
ಒಡಕು ಗ್ರಾಮಾಫೋನು.

೪

ಬಂದರಲ್ಲಾ ಕೊನೆಗು ಯಜಮಾನರು !
ಬ್ಯಾಂಕಿನಲಿ ಹಿರಿಹೆಸರ ಬಡ್ಡಿ ಬೆಳೆಯುತ್ತಿದ್ದರೂ ಹೊಸತು
ಗಳಿಕೆಗಾಕ್ರೋಶಿಸುವ, ಕುದಿವ ಜೀವ.
ಹಾಲು ತೀರಿದ ಬತ್ತುಗೆಚ್ಚಲಿನ ಸುರಧೇನು ;
ನೂಲಿಲ್ಲದೇ ಅರಿವೆನೇಯುವಾತ್ಮದ ಮಗ್ಗ ;
ಅರ್ಧ ಹೂತಿದ್ದರೂ ಕೆಸರಲ್ಲಿ ಆಕಾಶಯಾನ ನಟಿಸುವ
ಅಧಟ, ಕವಿಭಟ !

**Words, Words, Words**
ಚೆಂಡನೆರಡೂ ಕೈಲಿ ಹಿಡಿದು ಮೇಲಕ್ಕೆಸೆದು ತಾನೆ ಹಿಡಿವುದು,
ಹಿಡಿದು ಚಪ್ಪಾಳೆ ತಟ್ಟುವುದು.
ತಾನೆ ನಗುವುದು, ನಕ್ಕು ಮತ್ತೆ ಮೇಲಕ್ಕೆಸೆದು ಹಿಡಿದು
ಗಹಗಹಿಸುವುದು.

ಕೈ ಚಾಚುವಷ್ಟರಲ್ಲೇ ನೀವು ಅದ ಹಿಡಿದು
ಎದೆಗವಚಿ, ಕಣ್ಮುಚ್ಚಿ
ರಸಲೀನನಾಗುವುದು !
ವ್ಹಾರೆವಾ, ಕವಿಭೂಪ !
ಹಳಬ, ವಿದ್ಯಾವಿನೀತ, ಅನುಭವ ದಾಟಿ ಅನುಭಾವಕೇರಿದವ,
ನಿರಹಂಕಾರಿ, ಆತ್ಮರೂಪಿ !

ಇದ್ದಷ್ಟು ಕಾಲ ಭೂಗತನಗರವೀಥಿಯಲ್ಲೇಕಾಂಗಿಯಾಗಿ
ಸಪ್ರೇತ ತೊಳಲಿದ ಹಾಗೆ.
ನೀರು ತುಂಬಿದ್ದಂತೆ ಕಂಡ ಕೆರೆಯಲ್ಲೀಜುಬಿದ್ದ ಕೂಡಲೆ ಇದ್ದ
ನೀರೆಲ್ಲವೂ ಬತ್ತಿ ಕಾಲುಕೆಸರಲ್ಲಿ ಸಿಕ್ಕಿದ ಹಾಗೆ.

ಹೊಟ್ಟೆತುಂಬಾ ಸತ್ಯಶಿವಸುಂದರರದ ಜಳ್ಳಿನುಪ್ಪಿಟ್ಟು ತಿಂದು,
ಮಂತ್ರಪೂತ ನಲ್ಲಿಯ ನೀರನೆರಡು ಲೋಟಾ ಹೀರಿ
ಹೊರಬಿದ್ದೆ.
ಅಪ್ಪಟ ಯೂರೋಪು ಮಾದರಿ ಹೋಟಲಿಗೆ ಚಿಮ್ಮಿ
ಸೋಫಾದ ಮೇಲಕ್ಕೆ ಬಿದ್ದೆ.

ಡಿಸೆಂಬರ್ : ೧೯೫೩.

# ಹದ್ದು

ಕನ್ನಡಿಯ ಗೂಡಿನೊಳ ನೀರಪಂಜರದಲ್ಲಿ
ಸಣ್ಣ ಸಣ್ಣ ಬಣ್ಣ ಬಣ್ಣದ ಮೀನು
ನುಣ್ಣ ನುಣ್ಣನೆ ರೆಪ್ಪೆಯದುರಿನಲ್ಲಿ ಸಲೀಸು
ಈಜಿ ಅಂಗತ್ತನೆ, ಬೋರಲಾಗಿ, ಮಗ್ಗುಲ ಮೇಲೆ
ಆಡಿ ಮುಳುಗುವುವು; ಮೇಲೆದ್ದು ಹೊಳೆವುವು.
ಕಾಗದಮುಗಿಲ ಮೇಲೆ
ಕಪ್ಪುಗೆರೆಯ ಕಮಾನು, ಚುಂಗು, ಬಾಲಂಗೋಚಿ
ಮೂಡಿ ತೊನೆದಾಡಿ, ತತ್ತರಿಸಿ ತಲೆಗರೆಯುವುದು.
ಇಲ್ಲಿ ಕೆಳಗಡೆ ಬರೀ ಸಂಕೋಲೆಲೈಜಿಯಂ ಒಂದೇನೆ ಕಾಣುವುದು.
ಜೈಲ ಪಾಗಾರದೊಳಗಾಡುವೀ ಸೆರೆಯಾಳು
ಮುಗಿಲ ಮರೆತೆರೆಯಲ್ಲಿ ಲಾಳಿಕುಣಿವ.
ತುಯ್ಕುವುದು ಲೈಜಿಯಂ ಹಿಂದಕ್ಕೆ, ಮುಂದಕ್ಕೆ, ಮೇಲೆ, ಕೆಳಗೆ.
ಚುಕ್ಕೆಚುಕ್ಕಾಣಿ ಚಮಕುವ ದಿಗಂತದ ರೇಖೆ
ಕುಗ್ಗುತ್ತಲಿದೆ ಕ್ಷಣ ಕ್ಷಣ;
ಕೂವೆಮರದ ತುದಿಹಾಯಿಯೊಂದೇ ಈಗ
ತುಯ್ಕುವುದು ಇತ್ತಿತ್ತ—ಇಲ್ಲ—ಅತ್ತತ್ತಲೋ?
ಕೆಳದಡಕ್ಕಪ್ಪಳಿಸಿ ಬಿತ್ತೊ,
ಅಥವಾ,
ಮೇಲೆ ಮೇಲೆ ನೇರಿತ್ತೇರಿತೋ, ಅಹಾ,
ಬೆಳ್ಳುಳ್ಳಿಸಿಪ್ಪೆ ಮುಗಿಲಾಚೆ ನೇಪಥ್ಯದಲಿ
ಕನ್ನಡಿಯ ಮುಂದೆ ತನ್ನ ಕಿರಾತಪಗಡೆ ನೇವರಿಸಿ,
ಹುಬ್ಬುಗಳ ಮೀಸೆಕುಡಿ
ತಿದ್ದಿ ತೀಡಿತ್ತೋ!
ಕಾಲ ಕೋಳದ ಝಣರು ಜಿಗಿದು ಬಂತು:

ಪರದೆಯಾಚೆಗೆ ಬಡಿದು ಬಾರಿಸಿತು ರಣಚಂಡೆ ;
ಗಾಳಿಗಡಲಲ್ಲಿ ರಣನೌಕೆಯ ಜಲಕ್ರೀಡೆ :
ಏರು ತೆರೆಗಳ, ಮಹಾಮೇರು ತೆರೆಗಳ ಮೇಲೆ
ತೇರು, ಹೂವಿನ ತೇರು

ಕ್ಷಣಕಾಲ ;
ಸರಳಿನಾಚೆಯ ಸಿಂಗದರಸುನಡೆಯೊಯ್ಯಾರ.

ಗೂಟಕ್ಕೆ ಕಟ್ಟಿದ್ದ ಹಸುಕೊರಳಹಗ್ಗ ಸ್ಪ್ರಿಂಗೆದ್ದು
ತಾಗಿತು ಪರಿಧಿಗೆರೆ ;
ಈಜುಕಲಿ ಏರಿಂದ ಬಿದ್ದು ಕೆಳಕೆರೆಯ ತಳತನಕ
ಗುಂಡು ಮುಳುಗಿದ ಹಾಗೆ,
ಬಿತ್ತು ಬಾಂಬರ ಕೋಟೆ ;
ಬಿತ್ತು : ಕ್ಯಾಮರಕಣ್ಣ ಬಲೆಯಲ್ಲಿ
ಬಾಂದಳ ತಿಮಿಂಗಿಲ.
ಅರ್ಧಾಟದಲಿ ತೆರೆಬಿತ್ತೊ, ಅಥವಾ ಇದೇ
ನಾಟಕದ ಶಿಖರನೋಟವೊ—
ಅಂತು—
ಹದ್ದು, ರಣ ಹದ್ದು !
ಕೆಳಗೆ ರಪರಪ ರೆಕ್ಕೆಸದ್ದು.
ನೆಲದ ಜೀವದ ಬಿಂದು ಕೋಳಿಮರಿಯನ್ನಿರುವೆತುಳಿದು ಹಿಗ್ಗಿತು
ನಭದ ನೀರಗುಳ್ಳೆ.

ಒಂದೆ ಕೊಕ್ಕೊಕ್ಕೋವಿನಲ್ಲಿ ಈ ನಲ್ಲಿ ನಿಲ್ಲುವಾಗಿನ ಕೊನೆಯು
ಗೊರೆಗೊರಾಟ ;
ಕೀಚು ಕರುಳನ್ನಿರಿಯುವಷ್ಟು ಮೊನಚು ;
ಮಧ್ಯಾಹ್ನ ಮೌನದ ಬೆಲೂನು ಸಾವಿರ ತೂತು ;
ಈಗಿಲ್ಲಿ ಎಲ್ಲವೂ ಬಯಲೆ ಬಯಲು.
ಬಳಿಯ ತೆಂಗಿನ ಮರದ ಚಪಲ ಚೌಕುಳಿಯಲ್ಲಿ

ಒಡ್ಡಿತ್ತು ಬಿರುಬಿಸಿಲು ತನ್ನ ದಾಳ ;
ಗಾಳಿರಪರಪಮಗ್ಗದಲ್ಲಿ ರಣರಣಬಿಸಿಲು
ಹೆಣಬಟ್ಟೆ ಗಜನೂರು ನೇಯುತಿತ್ತು.
ನಡುಹಗಲ ಕಗ್ಗೊಲೆಯ ನೆನಪನೊರಸುತ್ತಿತ್ತು
ಸತ್ತಲೆಯ ಕಿತ್ತಳೆಯ ಬತ್ತಲಾಟ.
ರೈಲು ಬಂದೋಡಿದ್ದ ಕಂಬಿ ನಿರ್ಜನ ನೆಲದ ಮೌನದವಲಿಗೆ ತಲೆಯ
ತೂಗುತಿತ್ತು.
ಇಲ್ಲ ಬೆರಿಯಾ ಹೆಸರು ಈಗ ರಷ್ಯಾವಿಶ್ವಕೋಶದೊಳಗೆಲ್ಲು ಇಲ್ಲ ;
ರಣಹದ್ದು ಬಂಟನನ್ನಮುಕಿ ಕಬಳಿಸಿದಂಥ ಬೆಹರಿಂಗು ಜಲಸಂಧಿ ಗೊಂದೆ ಗೆಲ್ಲ!

೨

ಆದರೂ ಇತ್ತು ಕುಣಿಯುತ್ತಿತ್ತು ಕೋಳಿಮರಿ ಒಂದರ್ಧ ನಿಮಿಷಕ್ಕೆ ಮೊದಲು ;

ಅದಕ್ಕೆ ಗೊತ್ತಿರಲಿಲ್ಲ ; ಗಟ್ಟಿ ನೆಲವೇ ಸಡಲಿ ಆಗಬಹುದೆಂದು ಹುದಲು.
ಗಾಳಿಯಿಂದೊರಸಿ ತೆಗೆದರು ಕೂಡ ಗುಹೆಯಲ್ಲಿ ಮೊಳಗುತ್ತಲಿಲ್ಲವೇ ಮುಗ್ಧ ತೊದಲು ?

ಇದ್ದದ್ದು ಇಲ್ಲವಾದದ್ದು ಈ ಎರಡಕ್ಕು ನಡುವೆ ಅಂತರ್ಗಾಮಿ ಕರುಣೆ-ಹೊನಲು ;

ಹಸಿಯಿಟ್ಟು ಗಾಯವನ್ನೊಳಗೆ ಚಿಗುರುತ್ತಿತ್ತು ಹರಳುಗಡಸಿನ ಮುತ್ತು ಚಿಪ್ಪಿನೆಸಳು ;

ಕ್ರೌಂಚವಧದುದ್ವೇಗದಳಲ ಬತ್ತಲೆಸುತ್ತ ರಾಮಾಯಣಶ್ಲೋಕರೇಶ್ಮೆ ತೊಗಲು.

ಇದು ಪುಟ್ಟ ಕೋಳಿ ಮರಿ :
ಮೊನ್ನೆ ತಾನೇ ಹೊರಜಗಕ್ಕೆ ಕಣ್ಬಿಟ್ಟದ್ದು,
ಗರಗಟ್ಟಿ ಹೊಸಲು ದಾಟಿದ್ದು ;

ಕೆಸರುಗೂಟದ ಕಾಲ ಕಾಲಾವಧಿಯ ಮೇಲೆ ಗಾಳಿಗೋಪುರ ಕರಗವಾಡಿಸಿದ್ದು;
ಹೊರಗಾಳಿಸಾರಾಯಿಗುಬ್ಬಿ ಠಾಕಣಜಿಗಿದು ತನ್ನ ಗಡಿಗೆ ಪತಾಕೆ ತಾಗಿಸಿದ್ದು;
ನಸುಕುನೇಸರ ಬಿಸಿಲಿಗೀಸುಗುಂಬಳ ತೇಲಿ ಈಚೆಗಾಚೆಗು ಲಾಳಿ ತೂರಿಸಿದ್ದು ;
ತಿಪ್ಪೆಸುತ್ತಲ ನೃತ್ಯವೃತ್ತದಲ್ಲಿ ಸಲೀಸು ಗೋಸುಂಬೆ ಕುಣಿದು ಕೊರಳಾಡಿಸಿದ್ದು;
ಕುಣಿತದಾಟಕ್ಕೆ ನಸುನಂಜಿಕೊಳ್ಳಲು ನೆಲವ ಕದಕಿ ಹುಳುವ ಫಳಾರ ಸಾಗಿಸಿದ್ದು;
—ಈಗ ತಾನೇ !
ಆದರು ಅದನ್ನು ಈಗೆಲ್ಲು ಕಾಣೆ :
ಶಾಖೋಪಶಾಖೆ ಹರಡಿದ್ದ ಹೆಮ್ಮರದಲ್ಲಿ ಗೆಲ್ಲು ಮುರಿದದ್ದು ಬರಿ ಗಾಳಿಮಾತು;
ಕಡಲ ತೀರದ ಮರಳ ಕಣ ತೂರಿ ಹೋದದ್ದು ಅಚ್ಚು ಕಾಣದ ಬರಿಯ
ಹುಚ್ಚು ಸದ್ದು.
ತನ್ನ ಹದ್ದನ್ನು ಮೀರದೆ ಕೂಡ ಆಗಸದ ಹದ್ದಿನೊಳಗೀ ಮುಗ್ಧ ಬಿದ್ದ ;
ಕೊಕ್ಕಿನಿಕ್ಕಳದೊಳಗೆ ಸಿಕ್ಕಿದರೆ ಹುಳುವನ್ನು ಮುಕ್ಕುವಾಗಲೆ ಸಿಕ್ಕಿ ಬಿದ್ದ !

೩

ಸಮಕೇಂದ್ರವೃತ್ತದಾಚಂದ್ರತಾರಕೆ ಮಾಲೆ.
ಒಂದರೊಳಗೊಂದು ಕೂಡಿ ಕ್ರಮಬದ್ಧ
ಪರಧಿ ಪ್ರಪಂಚ.
ಚೆನ್ನಾಗಿ ಎಣ್ಣೆಯುಜ್ಜಿದ ಚಕ್ರಸಂತಾನ
ಉರುಳುತಿವೆ ನಿರಾಯಾಸ ಹಳಿ, ತೊಗಲಪಟ್ಟಿ, ಚೈನಿನ ಸತಳ ದಾರಿಯಲಿ ;
ಒಂದು ಜೀವದ ಹದ್ದಿನೊಳಗೆ ನೂರಾರಕ್ಕೆ ಹದ್ದು :
ಬೂಟಿನ ಕೆಳಗೆ
ಜಿರಳೆ, ತೊಂಡಂಗಿ, ಕಟ್ಟಿರುವೆ, ಚೇಳಿನ ಕೊಂಡಿ.
ತನ್ನ ಗಡಿಬಿಟ್ಟು ಅದರಾಚೆ ನುಗ್ಗಲು ಯಾವ
ವೃತ್ತಕ್ಕು ಇಲ್ಲ ಅಧಿಕಾರ.
ಬಾಣದ ಗುರಿಗು
ಇದೆ ಒಂದು ಗೆರೆ.

ಬೀಸುಗತ್ತಿ, ಸಿಡಿಯುವ ಬಾಂಬು, ಹಲ್ಲುಗುರುಗಳ ಮೊನೆಗು
ಇದೆ ನಿರಂತರ ಅದಕದಕ್ಕೆ ಗಡಿಕಾವಲು. ಅಪರಂಪಾರ
ವಾರಿಧಿಯ ಪರಧಿಯಾಚೆಗು ಬೇರೆ ಪರಿಧಿ ಇವೆ, ನೂರಾರು.

೪

ಇದು ದೊಡ್ಡ ಜೇಡರ ಬಲೆಯು ;
ರೇಷ್ಮೆ ನುಣುಪು ನೂಲಿನ ಕೋಟೆಕೋಟೆಯೊಳ
ಕೋಟೆಕೇಂದ್ರದಿ ಧ್ಯಾನಮಗ್ನ ಜೇಡನ ಬಾಯಿಯಲ್ಲೀಚೆ ಕಡೆ ಹೊಕ್ಕ
ನೊಣ, ಆಚೆ ಕಡೆ ಹೊಕ್ಕಳಲ್ಲಗೊ ಗಾಳಿಹಗುರು ನಯದ ವಿಶಾಲ
ಜಾಲ, ಸೇವಿಗೆ ನೂಲು.

ತನ್ನ ಮೂಲಕಭೇರಿಯಿಂದ ಗಡಿಗೆರೆವರೆಗೆ ಗಸ್ತು ಹೊಡೆಯುವ ಠಾಕು, ೧೦೦
ಠೀಕು, ಹೆಗಲ ತುಪಾಕಿ, ಮಾಮೂಲು ಮಾತು.
ಲಗ್ಗೆ ಭಯವಲ್ಲ, ಬರಮಾಡಿಕೊಳ್ಳುವ ಬೆಡಗು.
ಕದವ ತೆರೆದಿಟ್ಟು ಒಳಗೆಲ್ಲೊ ಪೇಶನ್ಸಾಡುವಂತಿದೆ ಬಕಧ್ಯಾನ ;
ಆದರೂ ನೊಣ ಬಂದ ತಂತಿ ತಾಗಿ ಸಿಗಿವ ವಿಧಾನ,
ಇದು ಪುರಾಣ.

೫

ಮುದಿಹದ್ದು ಕೊಳೆವ ಕೊಳೆಕೆಸರ ರಾಶಿಯ ಸುತ್ತ
ಕುಣಿಯುವುದು ಕೊರಳೆತ್ತಿ ಪುಟ್ಟ ಕೋಳಿ ;
ಗಿಡುಗಬಾಯಿಯ ಕೋಳಿ ಜೋಲುತಿರೆ ಬಾನಲ್ಲಿ
ಮಿಡುಕುತಿದೆ ತುಂಡು ಹುಳು ಮಣ್ಣಿನಲ್ಲಿ
ನನ್ನ ಕಿರಿಕೋಣೆ ಸುತ್ತಲು ಮೊರೆವ ಭಯದ ತೆರೆ ;
ನಕ್ಕು ಬಿಚ್ಚಿವೆ ಹಾಯಿ ನೂರು ನೌಕೆ ;
ಕನ್ನಡಿಯ ಗೂಡ ವಿಸ್ತಾರ ಸಾಗರದಲ್ಲಿ
ಕುಣಿವುವೆಷ್ಟೋ ಮೀನು ಮರೆತು ಮೇರೆ.

–೧೯೫೬

# ಪ್ರಾರ್ಥನೆ

ಪ್ರಭೂ,
ಪರಾಕು ಪಂಪನ್ನೊತ್ತಿಯೊತ್ತಿ ನಡ ಬಗ್ಗಿರುವ
ಬೊಗಳುಸನ್ನಿಯ ಹೊಗಳುಭಟ್ಟ ಖಂಡಿತ ಅಲ್ಲ ;
ಬಾಲವಾಡಿಸಿ ಹೊಸೆದು ಹೊಟ್ಟೆ ಡೊಗ್ಗುಸಲಾಮು
ಬಗ್ಗಿ ಮಿಡುಕುವ ಸಂಧಿವಾತ ಪೀಡಿತನಲ್ಲ ;
ತನ್ನ ಮೋಂಬತ್ತಿ ನಂದಿಸಿ ಸಂದಿಬೆಳಕಲ್ಲಿ
ಜುಮನರಸುವ ಷಂಡ ಜಿಗಣೆಯಲ್ಲ ;
ಕಾಲಪುಷ್ಪರ ಪೃಷ್ಟಕೊಡ್ಡಿ ಬೆನ್ನ, ಕಠಾರಿ
ಒರೆಗೆ ತುರುಕಿರುವ ಹೆಂಬೇಡಿಯಲ್ಲ.

ಈ ಸಣ್ಣ ದೊಂದಿಯನ್ನೆತ್ತಿ ಹೊತ್ತಿನ ಮುಖಕ್ಕೆ
ಬೆಳಕು ಹರಿದದ್ದು ತನ್ನಿಂದಲೇ ಎಂದು ತನ್ನೊಳಗೆ
ಮುಖ ಕಿರಿವ, ನೆಣ ಬಿರಿವ, ಬಗ್ಗಲಾರದ ಬೊಜ್ಜ,
ಕೋಲುನಡಿಗೆಕವಾತು ಕಲಿತ ಕೊಬ್ಬಿದ ಹುಂಜ :
ವಾಸಿಮಾಡಯ್ಯ ಈ ಜಲೋದರರದ ಭಾರದ ಜಡ್ಡ.
ಕಮರುತೇಗಿನ ಕಪಿಲೆಹೊಡೆದು ಹಗಲೂ ಇರುಳು
ತೇಗಿಗೊಂದು ಅಮೋಘ ಸ್ಫೂರ್ತಿಗೀತವ ಕರೆವ
ರೋಗದ ಘಸಲನಾದಷ್ಟು ಸವರೋ ತಂದೆ !
ತಿಂದದ್ದು ಸರಿಯಾಗಿ ರಕ್ತವಾಗುವ ಹಾಗೆ
ಅನುಗ್ರಹಿಸು ; ಅರಗದಂಥ ಕಚ್ಚಾ ಗಾಳಿಗೀಳುಗಳ
ಕಾಗದದ ಮೇಲೆಲ್ಲ ಕಾರಿಕೊಳ್ಳದ ಹಾಗೆ
ಏರ್ಪಡಿಸು ಸಹಜ ಹೊರದಾರಿಗಳ ; ರಹದಾರಿಗಳ
ಕೊಡು ಎಲ್ಲರಿಗು ತಮ್ಮ ತಮ್ಮ ಖಾಸಗಿ ಮನೆಗೆ.
ಎಲ್ಲಕ್ಕಿಂತ ಹೆಚ್ಚಾಗಿ

ಒಂದು ತುತ್ತನ್ನು ಮೂವತ್ತೆರಡು ಸಲ ಜಗಿದು, ನುರಿಸಿ
ಜೊಲ್ಲಿಗೆ ಮಿಲಾಯಿಸುವಷ್ಟು ಆರೋಗ್ಯ
ಶಾಸ್ತ್ರದ ಮೊದಲ ಪಾಠ ಕಲಿಸು. ಕಲಿಸದಿದ್ದರು ಕೂಡ
ಕಲಿತಿಲ್ಲ ಎಂಬ ನೆನಪುಳಿಸು; ಉಳ್ಳಾಗಡ್ಡೆ
ತಿಂದು ಕೊರಳೆಲ್ಲ ಕಸ್ತೂರಿಯಾಗುವುದೆಂಬ
ಭ್ರಮೆಯ ಕಳೆ; ದೊಡ್ಡ ದೊಡ್ಡ ಮಾತು ಬೆಲೂನು
ಹಿಗ್ಗುವಾಗ್ಗೆಲ್ಲ ತಾಗಿಸು ನಿಜದ ಸೂಜಿಮೊನೆ.

ತೆಕ್ಕೆಗೊಗ್ಗದ ಹಗಲುಗನಸಿನ ದಢೂತಿ ತೊಡೆ
ಸಿಕ್ಕದೇ ಸಿಕ್ಕಿದಂತಾಗಿ ತೂಬನು ತೆಗೆವ
ಸ್ವಪ್ನೇಂದ್ರಿಯದ ಸ್ವಯಂಚಾಲಕಕೆ ತಡೆಹಾಕು;
ಅಲ್ಲದೇ, ಗಾಳಿಯಲ್ಲಿ ಬತ್ತಲೆಸುಳಿವ
ಅಪ್ಸರೆಯರ ಅನಂಗಸಂಘಟ್ಟನೆಗೆ ವೃಥಾ
ಮುಪ್ಪುಮೈಥುನದಹಂಕಾರ ಕೆಶಳಿಸಬೇಡ.
ಕಳುಹಿಸಯ್ಯಾ ಬಳ್ಳಿಗೆ ಕೃಪೆತಳೆದು ಆಗಾಗ್ಗೆ
ವಾಸ್ತವದ ಹೆಣ್ಣುಗಳ, ನಿಜದ ತೊಡೆಗಳ, ಆತ್ಮ
ಹೊಕ್ಕು ತಿಕ್ಕಲು ತಕ್ಕ ಸುಕ್ಕಿರದ ಹೊಸ ತೊಗಲುಗಳ.

ಹೊರಗೆ ಬೀಸಲೆದೊಳಕ್ಕೆ ಹಿಮ್ಮೆಟ್ಟಿದಾಗ್ಗೆಲ್ಲ ಬರಿ
ಪ್ರೇತಾತ್ಮಗಳ ಗೆರಿಲ್ಲಾಪಡೆಯ ಕಳಿಸದಿರು.
ಬೆಳಸಿಕೊಂಡೇ ತಮಗೆ ತಕ್ಕ ಮಾಂಸವ, ತೊಗಲ
ಬರಲಿ ಅತಿಥಿಗಳೆಲ್ಲ ಮನೆಗೆ. ಬಂದವರಲ್ಲಿ
ತೊಗಲನೊಲ್ಲದ ಅತಿಥಿತುರಿಕೆ ಕಳೆಯೋ ತಂದೆ.

ಹಡಗ ತಾಗಿಸು ಪ್ರತೀ ಬಂದರಿಗು. ಯಾವೊಂದು
ತಿಮಿಂಗಿಲ ತೊಡೆಯು ಕೂಡ ನುಂಗಿ ಕೊಳಸದ ಹಾಗೆ
ನಡಸು ಬಂದಿರಿನಿಂದ ಬಂದರಿಗೆ. ಆಮದು, ರಫ್ತು
ಸಾಗುತ್ತಲಿರಲಿ ಕೊನೆವರೆಗೆ, ಆದರು

ಫರಂಗಿರೋಗ ತಗಲದ ಹಾಗೆ
ಉಳಿಸು ಪೂರ್ವಾರ್ಜಿತದ ರತಿವಿವೇಕದ ಶಿಖೆಯ.

ಗಾಳಿಗಲ್ಲಾಡುವುದು ದೊಂದಿ. ವಿದ್ಯುದ್ದೀಪವಾದರೂ
ಬೀಸುದೊಣ್ಣೆಗೆ ಬಂದಿ. ನಿನ್ನ ಗಾಳಿಯ ಬೆಟ್ಟ
ಘನಿಸಿ ಆಗುವ ಧಾತು ದುಡುಕಿ ಬಗೆವುದು ನೆಲದ
ತೊಡೆಯ ; ಚೆಲ್ಲುವುದೆಲ್ಲ ಕಡೆಯು. ದ್ರಾವಣಸುಖಕ್ಕೆ
ವಿವಶ ಮುಳ್ಳೂ ಹುಲ್ಲು. ಕ್ಷಣದ ಸಾರ್ಥಕ ರತಿಗೆ
ಮಾಸಗಳ, ವರ್ಷವರ್ಷ ಶತಮಾನಗಳ
ವಿರತಿ, ಸಮರತಿ, ವಿಕೃತರತಿ. ತುಂಬಿ ನವಮಾಸ
ಬರುವ ಜೀವಪವಾಡ ಕೆಲಸ ಕಲಿಸೋ ತಂದೆ.

ಕಲಿಸು ಬಾಗದೆ ಸೆಟೆವುದನ್ನು, ಬಾಗುವುದನ್ನು ;
ಪೊತ್ತಿನ ಮುಖಕ್ಕೆ ಶಿಖೆ ತಿವಿವುದನ್ನೂ ಹಾಗೆ
ಗಾಳಿಗಲ್ಲಾಡಿ ಬಳುಕಾಡಿ ತಾಳುವುದನ್ನು ;
ಕಲಿಸು ಸವಾರಿಕುದುರೆಯಾಗದ ಹಾಗೆ
ಕಾಡುಕುದುರೆಯ ಕೆನೆತಕೊಬ್ಬನ್ನು, ಹಾಗೆಯೇ
ಜಗಭಾರಗಾಳಿತೊಡೆ ತಾಳಿ ಹೊರುವಭ್ಯಾಸ
ಕುದುರಿಸು ; ನಿನ್ನಂತೆ ಊರ್ಧ್ವರೇತಸ್ಕನಾಗೊಬ್ಬೊಂಟಿ
ಮೇಲುಮಾಳಿಗೆಯ ಕಿರುಕೋಣೆ ಮೈಮರೆವನ್ನು ;
ತಕ್ಕ ತೊಡೆನಡುವೆ ಧಾತುಸ್ಖಲನದೆಚ್ಚರವ–

ಈ ಅರಿವು ಅರೆಹೊರೆದ ಮೊಟ್ಟೆ, ದೊರೆ ; ಚಿಪ್ಪೊಡೆದು
ಬರಲಿ ಪರಿಪೂರ್ಣಾವತಾರಿ ವಿನತಾಪುತ್ರ–
ಗಾಳಿಕಡೆಯಲು ಸೆಟೆದ ಬೆಳ್ಳಿ ಮಂತು,
ನಿನ್ನ ತೊಡೆಹೊರೆಕೆಳಗೆ ಮೆತ್ತೆ—ಸಡಿಲು.

—ಜೂನ್ : ೧೯೫೭

# ಭೂತ

## ೧

ಕಾಡುತ್ತಿವೆ ಭೂತಕಾಲದ ಭ್ರೂಣಗೂಢಗಳು :
ಹುಗಿದ ಹಳಬಾವಿಯೊಳ ಕತ್ತಲ ಹಳಸುಗಾಳಿ
ಅಂಬೆಗಾಲಿಟ್ಟು ತಲೆಕೆಳಗು ತೆವಳುತ್ತೇರಿ
ಅಳ್ಳಳ್ಳಾಯಿ ಜಪಿಸುವ ಬಿಸಿಲಕೋಲಿಗೆಗರಿ ತೆಕ್ಕಾಮುಕ್ಕಿ
ಹಾಯುತ್ತಿದೆ ತುಳಸಿವೃಂದಾವನದ ಹೊದರಿಗೂ.

ತೊಟ್ಟುಕಳಚಿದ ಹೊಕ್ಕುಳಿನ ಬಳ್ಳಿ, ದಡದಲ್ಲಿ
ಕತ್ತರಿಸಿದಿಲಿಬಾಲ ಮಿಡುಕುತ್ತದೆ.
ಕತ್ತಲಲ್ಲೇ ಕಣ್ಣುನೆಟ್ಟು ತಡಕುವ ನನಗೆ
ಹೊಳೆವುದು ಹಠಾತ್ತನೊಂದೊಂದು ಚಿನ್ನದ ಗೆರೆ,
ಅಮಾವಾಸ್ಯೆ ಕಂದಕಗಳಲ್ಲಿ ಹೇಗೋ ಬಿದ್ದು ಒದ್ದಾಡುತಿರುವ
ಗರಿಸುಟ್ಟ ತಾರೆ.

## ೨

ವರ್ತಮಾನ ಪತ್ರಿಕೆಯ ತುಂಬ ಭೂತದ ಸುದ್ದಿ :
ನೀರ ಮೇಲಕ್ಕೊಂದು ಮುಡಿ, ಕೆಳಕ್ಕೇಳು ಮಂಜಿನ ಶಿಖರಿ ;
ಇದ್ದಕ್ಕಿದ್ದಂತಕಸ್ಮಾತ್ತಗ್ನಿನುಡಿಯುಗಿವ
ಮಂಜು ಮುಸುಕಿದ ಮುಗ್ಧ ಜ್ವಾಲಾಮುಖಿ.

ಪತ್ರಿಕೆಯ ಮುಚ್ಚಿದರು–
ಸದ್ದಿರದ ಖಾಲಿ ಕಂಕಾಲಕೋಣೆಗಳಲ್ಲಿ
ತಾಳವಿಲ್ಲದೆ ಮೂಕಸನ್ನೆ ಮುಲುಕುವ ತಿರುಗುಮುರುಗು ಪಾದದ ಪರಿಷೆ.
ಅಂತರಾಳಗಳಲ್ಲಿ ನಿಂತ ನೀರುಗಳಲ್ಲಿ
ಕಂತಿ ಕೈ ಒಡಿವ ಬೀಜಾಣುಜಾಲ ;
ಕಾಳರಂಗಸ್ಥಳದ ಪರದೆಮುರಿಮರೆಯಲ್ಲಿ
ಮಾತುಹೆಕ್ಕುವ ಮಿಣುಕುಮೊನೆಯ ಬಾಲ,–ಇವು
ಬಯಸವೆ ಹೊರಂಗಳದ ರಂಗುರಂಗಿನ ಬಳ್ಳಿಹೂವುಹೊದರ ?

೩

ನೀರುನೆಲೆಯಿಲ್ಲದಲೆವರು ಪಿತೃಪಿತಾಮಹರು,
ಗಾಳಿ ಹೆದ್ದೆರೆಲಾಳಿಗಂಟಿ ನೆಲ ಸಿಕ್ಕಿಯೂ ದಕ್ಕದವರು.
ಉಚ್ಚಾಟನೆಯು, ತರ್ಪಣದ ತಂತ್ರ ಬಲ್ಲೆ, ಆದರು ಮಂತ್ರ ಮರೆತೆ;
ಬರಿದೇ ಹೀಗೆ ಆಡಿಸುತ್ತಿದ್ದೇನೆ ಮಂತ್ರದಂಡ.
ಪುರೋಹಿತರ ನೆಚ್ಚಿ ಪಶ್ಚಿಮಬುದ್ಧಿಯಾದೆವೋ ;
ಇನ್ನಾದರೂ ಪೂರ್ವಮೀಮಾಂಸೆ ಕರ್ಮಕಾಂಡಗಳನ್ನು ಬಗೆಯಬೇಕು.

ಅಗೆವಾಗ್ಗೆ ಮೊದಲು ಕೋಶಾವಸ್ಥೆ ಮಣ್ಣು ;
ಕೆಳಕ್ಕೆ, ತಳಕ್ಕೆ ಗುದ್ದಲಿಯೊತ್ತಿ ಕುಕ್ಕಿದರೆ
ಕಂಡೀತು ಗೆರೆಮಿರಿವ ಚಿನ್ನದದಿರು.
ಹೊರತೆಗೆದು ಸುಟ್ಟು ಸೋಸುವಪರಂಜಿ ವಿದ್ಯೆಗಳ
ಇನ್ನಾದರೂ ಕೊಂಚ ಕಲಿಯಬೇಕು :
ಹೊನ್ನ ಕಾಯಿಸಿ, ಹಿಡಿದು ಬಡಿದಿಷ್ಟದೇವತಾ
ವಿಗ್ರಹಕ್ಕೊಗ್ಗಿಸುವ ಅಸಲುಕಸುಬು.

೪

ಬಾವಿಯೊಳಗಡೆ ಕೊಳೆವ ನೀರು ; ಮೇಲಕ್ಕಾವಿ ;
ಆಕಾಶದುದ್ದಕೂ ಅದರ ಕಾರಣ ಬೀದಿ ;
ಕಾರ್ಮುಗಿಲ ಖಾಲಿಕೋಣೆಯ ಅಗೋಚರ ಬಿಂದು
ನವಮಾಸವೂ ಕಾವ ಭ್ರೂಣರೂಪಿ–
ಅಂತರಪಿಶಾಚಿ ಗುಡುಗಾಟ, ಸಿಡಿಲಿನ ಕಾಟ–
ಭೂತರೂಪಕ್ಕೆ ಮಳೆ ವರ್ತಮಾನ.
ಅಗೆದುತ್ತ ಗದ್ದೆಗಳ ಕರ್ಮಭೂಮಿಯ ವರಣ ;
ಭತ್ತಗೋಧುವೆ ಹಣ್ಣುಬಿಟ್ಟ ವೃಂದಾವನ,
ಗುಡಿಗೋಪುರಗಳ ಬಂಗಾರ ಶಿಖರ.

೩೧-೫-೫೮

# ಸ್ವಾತಂತ್ರ್ಯ : ೧೯೫೮ ರ ಪಾಠ

## ೧

ಸಾಕುಮಕ್ಕಳೆ ಸಾಕು ಎಂದೆ ನಾಲ್ಕುಮಕ್ಕಳ ತಂದೆ
ದತ್ತು. ತಂದೆ ? ಹೇಗೋ ಬಾಗಿಲೊಳಕ್ಕೆ
ನುಸುಳಿ ಡವಗುಟ್ಟುವೆದೆ ನಾಲ್ಕು ನಿಂತುವು ಮೊಳಕೆ ಮೂಲೆಯೊಳಗೆ.
ಕರಿಮಣ್ಣ ಗಟ್ಟಿಗೊರಟೆಯೊಳಿದ್ದ ರಸವೊಡೆದು
ತೊರೆಮೊರೆಯಿತೆದೆ ನನ್ನ.
ತಾರೀಫು ಮಾಡಿದರು :
ಇವಕ್ಕು ನಿನ್ನಂತೆ ಮೂಗೊಂದೆ. ಕಣ್ಣುಗಳಂತು
ಥೇಟು ನಿನ್ನವೆ. ಯಾರು ಬಲ್ಲರು ? ನಿನ್ನ ಹೊಲ,
ನಿನ್ನದೇ ಬೀಜ ; ಸಂತಾನ ನಿನ್ನದೆನ್ನುವುದಕ್ಕೆ
ಅಭ್ಯಂತರವೆ ಇಲ್ಲ. ಸರಿ, ಎಂದೆ.
ತನಗೆ ತಾನೇ ಸುತ್ತ ಸಿಂಬಿಸುರುಟಿದ ಕರುಳು
ನಾಲ್ಕು ದಿಕ್ಕಿಗು ನಿಗಚಿ ಕುಡಿಚಾಚಿ ಹಿಗ್ಗಿತು ; ಹಾಗೆ
ಕಂಡು ಹಿಗ್ಗಿದೆ ಸಾಲುಗನ್ನಡಿಯೊಳಗೆ ನಿರಾತಂಕ–
ಪ್ರತಿಫಲದಹಂಕಾರರೇಖೆ.

ಏಕೊ ಮುಜಗರ ನನಗೆ. ಬಿಳಿದೊಗಲ ಚಿಣ್ಣರ ಕಂಡು
ಕರಿದೊಗಲಿನವನು ನಾಚಿದೆ. ಪರದೇಶಿ ಸಗೆಯ ಕೋಲಾಹಲದ
ಶಾಖೋಪಶಾಖೆಗಳ ಹೆಣಿಗೆ-ಮನೆಯೊಳಗೆ, ಹೊರಗೆ.
ನನ್ನ ಮಲಗುವ ಕೋಣೆಗೂ ಬಿತ್ತು ತುರಿನೆರಳು.
ಕತ್ತಿಯಾಡಿದ ಹಳುವದಲ್ಲಿ ತೊಳಲಿದ ಹಾಗೆ ;
ಹೊಸಬಣ್ಣ ಬಳಿದ ಮನೆಯಲ್ಲಿ ಮುರುಟಿದ ಹಾಗೆ.

ಶತಮಾನಗಳ ಶ್ರುತಿಸ್ಮೃತಿಯ ಪಂಚಾಯತನ
ಪೀಠದೊಳಗೂ ಹೊಕ್ಕ ಬೇರ ಬಿಗಿತ.
ಬಂದಳಿಕೆ ಸುತ್ತಿ ಬಿಗಿದಿರಲು ಸಾಕಿದ ತಂದೆ
ನಾನಾದೆ ಖಂಡಿತಾ ದತ್ತುತಂದೆ.
ಔರಸದ ಕಟ್ಟೆಯೊಳಗಿಲ್ಲ ತುಳಸಿಯ ಮೊಳಕೆ ;
ಕಾಡುಗಿಡಗಳ ಕಳಪೆಕಳೆಯ ಕೋಲಾಹಲವು ತೋಟದೊಳಗೆ.

೨

ಗಾಳಿ ಬೀಸುವುದೆಲ್ಲ ಕಡೆಗು. ಮೋಡದ ಆಟ
ಆಕಾಶದಂಚಿನಿಂದಂಚಿಗೆ ನಿರಾತಂಕ. ತಾರೆಯ ಮಿಟುಕು
ತೊಟಕುವುದು ಜಗತ್ತಿನಾದ್ಯಂತ. ಕಲ್ಪನೆಯೊಳಗೆ
ಬೀಜವೊಂದೇ ಹಬ್ಬಿ ತಬ್ಬಬಹುದಖಿಲಾಂಡಕೋಟಿಯನ್ನು.
ಪ್ರಾಣವೋ ಅಸ್ಥಿಪಂಜರಬದ್ಧ ; ಮೋಡವೇ
ಇಳಿವಾಗ ತನುರೂಪಿ ಬಿಂದು. ಬೆಳಕಿನ ಬದುಕು
ವಸ್ತುವಸ್ತುವ ಪರದೆಗವಲಂಬಿ.
ನೋಡೀ ನುಗ್ಗಿ :
ನಿಲ್ಲಲೊಂದಿಷ್ಟು ಲಂಗೋಟಿಯಗಲದ ಜಾಗ,
ಆಕಾರತಳೆದ ಆಭೋಗ. ಉಳಿದದ್ದೆಲ್ಲ
ಪರದೇಶ, ಗೊಡ್ಡುಗಾಳಿಯ ಕಾಮಕೇಳಿ ಫಲ.

ಬೆಳೆಯ ಬಿಡು ಮರವ ಬೀಸಾಗಿ ; ಒಂದೇ ಚದರ
ಗಜ ಸಾಕು. ಸುತ್ತೂ ಬೇಕೆ
ಬೇಲಿ ? ಬಿಗಿ. ಊರ್ಧ್ವಮುಖಿ
ಏರಲಿರಲುಕಾಶದಲ್ಲಿ ತಳಿರ ತುರಾಯಿ ತಕ್ಕಷ್ಟು ತಾವು.
ಕಟ್ಟದಿರು ಹಲಸಿಗೆ ಫರಂಗಿಕಸಿ. ಬಿಟ್ಟುಬಿಡು
ತನ್ನ ಪಾಡಿಗೆ ತಾನು ಶಾಖೆ ಹರಡಿ

ನೇಸರಿನ ಲಗ್ಗೆ ಹಾಸಿಗೆಗೆ ; ಗರ್ಭಾಧಾನ
ಜರುಗಿ ಹೀಚುಗಳ ಹೊರೆ
ತೂಗುವುದು ತೊಟ್ಟಿಲಲಿ ಪಟ್ಟ ಹಸುಳೆ;
ಕಟ್ಟುವುದು ಮರಿ ಬರುವ ಬಯಕೆ ಘನಿಸಿದ ಗೂಡು ;
ಹಕ್ಕಿಜೊತೆ ತಂಗುವುದು ಕೊಂಬೆಯೊಳಗೆ.
ಒಂದು ತಿನ್ನುವುದು ಸವಿಹಣ್ಣ ಚಪ್ಪರಿಸುತ್ತ
ನೋಡುವುದು ತಿನ್ನದಿನ್ನೊಂದು ಸುತ್ತ.
ಹಣ್ಣ ತಿನ್ನದಪೂರ್ವ ಹಕ್ಕಿ ಬರುವುದ ಕಾದು
ಕದವಿರದ ಕೋಟೆ ಅಲುಗಾಡುತ್ತದೆ.
ಎಷ್ಟೆ ಬಂದರು ಹಕ್ಕಿ ಅಷ್ಟು ಸಂತಸವುಕ್ಕಿ
ಗೃಹಸ್ಥಧರ್ಮದ ಗಂಧ ತೇಯುತ್ತದೆ.

೩

ಈಗಲೂ ನೆನಪುಂಟು : ಪಡುಗಡಲ ಮೊರೆ ಬಾರು–
ಗೋಲ ಬೀಸಿಗೆ ಸಿಕ್ಕ ನಮ್ಮ ಮನೆಗೆ
ಇತ್ತಿದಿರು ತೇರು ಹನೆಮರ ಹಳಬ. ತನ್ನ ಗರಿಛತ್ರಿಯೊಳ
ಗಿಟ್ಟು ಕಾಯಿಯ ಜೊಂಪೆ ಹೊರೆಯುತಿದ್ದ.
ಕಡ್ಡಿಗೊಂದೊಂದು ಗುಬ್ಬಚ್ಚಿ ಗೂಡನು ತೂಗಿ
ಹೊರೆಯ ಹೆಚ್ಚಳಕೆ ತಲೆದೂಗುತ್ತಿದ್ದ.
ಆಸಾಡಿ ಮಳೆಯು ಬಿಳಿಕಂಬಿ ಸಂದುಗಳಲ್ಲಿ
ಅರಳುತಿದ್ದುವು ಗುಬ್ಬಿ–ಅರಸಿನದ, ಹಾಲಿನ ಕೆನೆಯ
ಸಾಲಭಂಜಿಕೆ–ಪಾಚಿಗಟ್ಟಿ ಜಾರುವ ನೆಲದ
ನಮ್ಮ ಬಳುಮಾಡಿಗೂ ಬಂದ ವಿಶ್ವ.
ಇದು ಗಂಡು, ಇದು ಹೆಣ್ಣು, ಇದು ಪುಟ್ಟಮರಿ ಪಾಪ !
ತಿಂಡಿ ತಿನ್ನುತ್ತಿದ್ದ ನಾವು ಹುಡುಗರು ಬೆರಗು
ಗಣ್ಣ ನಲವಿಗೆ ಬಾಯಿಬಿಟ್ಟು ನಿಂತು

ಮರುನಿಮಿಷವೇ ಒಳಕ್ಕೋಡುತಿದ್ದೆವು, ತಂದು
ಚೆಲ್ಲುತಿದ್ದೆವು ಅಕ್ಕಿ ಬೆಳ್ಳಿಬೊಗಸೆ.
ಕುಟುಕು ಕುಟುಕಿನ ಸಫಲನಾಟ್ಯ, ಭೋರ್ಮಳೆ ಮೊರೆತ,
ಮರಿಯ ಕೆಂಬಾಯಲಿ ತಾಯ ಕೊಕ್ಕು
ಕುಟುಕಿಟ್ಟ ಬೆಳತಿಗೆಯ ಕರುಳ ತುಡಿತ.
ನಮಗೊ ಗುಬ್ಬಚ್ಚಿದೋಚುವ ಕಾಳ ಕಾಗೆಗಳ
ಸೋವಿ ಅಟ್ಟುವ ನಿಷ್ಠ ಬೆಂಗಾವಲಾಟ.
ಮಳೆಯು ಗುಡುಗಿನ, ಸಿಡಿಲಿನಟ್ಟಹಾಸದ ಜೈಲು ;
ಅಲ್ಲಿ ಸಣ್ಣಗೆ ಅರಳಿ ಹೊಳೆದ ಬಯಲು !

೪

ಮನೆಯ ಮಕ್ಕಳ ಕೂಡೆ ಆಡ ಬಂದರೆ ಊರ
ಹುಡುಗ ಪಾಳೆಯ, ತಿಂಡಿ ಕೊಟ್ಟು ನಗಿಸು ;
ಅಲ್ಲೆ ತಳವೂರಿಸಲು ಬಯಸಿ ತೆಳ್ಳಗೆ ಮಾಡ
ಬೇಡ ಇರುವಷ್ಟು ತಂಭಾಲ ಗುಟುಕು.

ಕಟ್ಟೆಯೊಳಗಡೆ ನೀರ ಹಣಿಸಿದರೆ ಬೆಳೆವ ಮರ
ತಲೆಮೇಲೆ ತಳೆಯುವುದು ಗೂಡ ಮಾಲೆ.
ಅದರೊಳಗೆ ಬಂದಳಿಕೆ ಬೆಳೆವ ವಿಶ್ವವಿಶಾಲ
'ಭಾವವೇ ಬಿಡುಗಡೆಗೆ ಬಿಟ್ಟ ಕೊಳೆ.

ಇಲ್ಲದಿದ್ದರು ಸರಿಯೆ ಮನೆಗೆ ತೊಡಲಿನ ರಕ್ಷೆ ;
ತರಬೇಡ ದತ್ತುಗಳ ಜಿಗಣೆಯೊಲುಮೆ.
ನಿನ್ನ ಬೀಜದ ಫಲಕೆ ಕಾದು ಕುಳಿತಿರು ಬರುವ
ವರೆಗೆ ಹಣ್ಣನ್ನುಣದ ಅಮರ ಪಕ್ಷಿ.

೮-೮-೧೯೬೮

# ನೆಹರೂ ನಿವೃತ್ತರಾಗುವುದಿಲ್ಲ

೧

ನೆಹರೂ ನಿವೃತ್ತರಾಗುವುದಿಲ್ಲ,
ಇನ್ನು ಪರವಾ ಇಲ್ಲ.

ಗಾಳಿ ಯಥಾ ಪ್ರಕಾರ ಬೀಸಲು ಬಹುದು ;
ಮೋಡ ಸೂಸಲು ಬಹುದು ;
ಕೋಳಿ ಕೋಕೋ ಎಂದು ಕುಕಿಲ ಬಹುದು.
ಕಾಗೆ ಬಂಗಾರವೇ ಆಗಿ ಬರಿ ಬಂಗಾರ,
ಉದ್ದುದ್ದ ಮಾತುಗಳ ಕೊಂಡಿಕೊಂಡಿ ನಿಚ್ಚಣಿಕೆತುದಿ
ಅಲಕಾವತಿಖಜಾನೆ ಮೂಸದಿರದು ;
ಹರಿದೀತು ವಾಗ್ರೂಪದಲ್ಲಿ ಹಾಲಿನ ಹಳ್ಳ
ತುಂಬಿಕೊಳ್ಳುವ ಹಾಗೆ ತಗ್ಗು-ತೆವರು ;
ಬುದ್ಧಿಸಮತೆ ಧಮಾಸು ಕೂಗಿಗೆಲ್ಲ ಸಫಾಯಿ,
ಆಸೇತು ತುಹಿನಾಚಲ !

೨

ಇಲ್ಲ, ಇಲ್ಲ, ನೆಹರೂ ನಿವೃತ್ತರಾಗುವುದಿಲ್ಲ,
ಯಾವ ಬಂದಳಿಕೆಗೂ ಶಂಕೆ ಬೇಡ !

ಎರಡು ದೋಣಿಗೆ ಕಾಲನಿಟ್ಟು ಸಾಗುವ ಶೂರ,
ಇಲ್ಲದ್ದ ತೃತೀಯ ಕ್ರಮಕ್ಕೆ ತಾವೆಲ್ಲೆಂದು ಕುದಿವ ಕುವರ ;

ಬೇಸಗೆಯ ಗೆರೆತೊರೆಯ ಕನ್ನಡಿಜಲದ ಮೇಲೆ
ಮಳೆಗಾಳಿನೆಗಸುಗಳ ನಗುವ ವೀರ.
ಮುಗಿಲನಳೆಯುವ ಹೆಜ್ಜೆ ನೆಲಕೆ ಸೋಕದಿದ್ದರು ಸರಿಯೆ,
ಬಲಿಯ ತಲೆಮೆಟ್ಟುವುದೆ ಕಾರಭಾರ.
ಅಳಿವೆ ಬಳಿ ಬುಗುರಿಗಿರಗಿರ ದೋಣಿಗಳ ಮೇಲೆ
ಉದ್ವಾಹು ನಿಗಚುವನು ಮುಗಿಲ ಫಲಕೆ.
ಅಳಿವೆಯಾಚೆಗೆ ಕಪ್ಪುಕಡಲೆ ? ಅಸಂಬದ್ಧ !
ಎಷ್ಟು ಚೆನ್ನಾಗಿದೆಯೊ ಮುಗಿಲ ಬಣ್ಣ !

೩

ಭರತ ವಾಕ್ಯಕ್ಕು ಬೆದರನೀತ ಧೀರೋದಾತ್ತ ನಾಯಕ,
ತೆರೆಬಿದ್ದರೂ ರಂಗ ಬಿಡದ ಚಿರ ಯುವಕ :
ಹೊತ್ತು ಸುತ್ತುತ್ತಾನೆ ಬಲು ಭಾರಿ ಭೂಗೋಳ,
ಗಂಟೆಗೆಂಭತ್ತೆಂಟು ಮೈಲಿ ಸ್ವಗತ ;
ಪ್ರೇಕ್ಷಕರ ಕಣ್ಣಲ್ಲಿ ಬೆವರೊರಸಿ, ನರಳಿ, ನಿಟ್ಟುಸಿರ ತಿದಿಯೊತ್ತಿ,
ಹೊರೆಹೊತ್ತ ನಿಂತು ನಸುನಗುವ ಭಂಗಿ !
ಚಪ್ಪಾಳೆಗೊಂದೊಂದಪೂರ್ವ ತಾನಿನ ವರಸೆ ;
ಈತನಿಂದಲೆ ರಂಗಭೂಮಿ ಭರ್ತಿ.
ಇಲ್ಲವಾದರೆ ಮರುಕ್ಷಣ ಕಂಪನಿ ದಿವಾಳಿ ;
ಇದ ತಿಳಿದ ಶೇರುದಾರರೆ, ಕೇಳಿ, ಕೇಳಿ :

ಇಲ್ಲ, ಇಲ್ಲ, ನೆಹರೂ ನಿವೃತ್ತರಾಗುವುದಿಲ್ಲ ;
ಸೇಕಡಾ ಹತ್ತಕ್ಕೆ ಮೋಸವಿಲ್ಲ !

ಮೇ, ೧೯೫೮

# ಕೂಪಮಂಡೂಕ

ನೀನೆಲ್ಲಿ ಈಗ : ಹೆಗಲಿಗೆ ಹೆಗಲ ಕೊಟ್ಟವನು,
ಹಾಯಿಯನ್ನುರುಟುರುಟು ಊದಿದವನು,
ದಾರಿಯುದ್ದಕ್ಕು ರಹದಾರಿ ಗಿಟ್ಟಿಸಿ ದಿಳ್ಳಿ
ದ್ವೀಪಾಂತರಕ್ಕೆ ಕೈ ಕೊಟ್ಟ ಸಖನು ?

ನಟ್ಟ ನಡುದಾರಿ ತೇಗುವ ತೋಟದೊಳಗಡೆಗೆ
ಮೂಗುಮುಟ ಕುಡಿದ ತಂಗೊಳದ ತಡಿಗೆ
ಟಾಂಗು ಕೊಟ್ಟು ಕಮಂಗಿ ಕಣ್ಣುಬಿಡುವಷ್ಟಕ್ಕೆ
ಕಂಬಿಕಿತ್ತೆ ವಿಶಾಲ ನೀಲದೆಡೆಗೆ

ಮೈ ಹೇರಿ ಇಲ್ಲಿ ಬಿದ್ದಿದ್ದೇನೆ ತಬ್ಬಲಿ ಹಾಗೆ ;
ಹೂವು, ಗಿಡ, ಬಳ್ಳಿ, ಮರ, ಪೊದೆ, ಪೊಟ್ಟರೆ
ಮುಖ ತಿರುಗಿಸುತ್ತ ಕಿಲಕಿಲ ನಗುತ್ತವೆ ; ಸುತ್ತು
ಮುತ್ತಲು ಕಿರಾತ ಲೇವಡಿಯ ಪಹರೆ.

ಎಲೆ ಹಳದಿತಿರುಗಿದೀ ಹಲಸು ನಿಂತಿದೆ ಹೆಳವ ;
ಹದ ಬಿಸಿಲು ಸಾರಾಯಿ ನೆತ್ತಿಗೇರಿ ;
ಗೊನೆ ಹಾಗಿ ಬಾಳೆ ಜೀವನ್ಮುಕ್ತ ಹಳಸುತಿದೆ
ಹಿಂಡುಹಿಳ್ಳುಗಳಲ್ಲಿ ಪ್ರಾಣವೂರಿ.

ಮೋಡಮಳೆಗಳ ಬುಗಿಲು ನೀಗಿ ಮಾಗಿದೆ ಕಾಳು ;
ಪಾಚಿಗಟ್ಟಿದೆ ಹಳ್ಳಬಾವಿ ಹೊನಲು ;
ಗಾಣ ಸುತ್ತುವ ಗಾಳಿ ಗೋಣಗಾಯಕ್ಕೊಳಿ
ಹೇಳುತ್ತದೆ ಇದೇ ಪಂದ್ಯದಂತ್ಯಮಜಲು.

ಹೆತ್ತು, ಸುಸ್ತಾದದ್ದೆ ನಿನ್ನ ನಂಬಿದ ಲಾಭ,
ಒರತೆ ಬತ್ತಿದ ಹಾಳು ಬಾವಿ ಹಾಗೆ
ಇರಬೇಕೆ ? ಒಳಗುಸುರುಕಟ್ಟಿ ಕುದಿವಬ್ಬಿಗಳ
ಎಬ್ಬಿಸೋ ಮೈಮುಟ್ಟಿ, ಅಟ್ಟು ಹೊರಗೆ.

ಹೋಗುತ್ತೇನೆ ಮತ್ತೆ ಹಿಂದಕ್ಕೆ ; ಬಯಸುತ್ತೇನೆ
ಮಂತ್ರಗಂಬಳಿ ನಿನ್ನ ಸುತ್ತಿ ಸುತ್ತಿ
ಹೊದೆದಪ್ಪಿ ಸತ್ತು ಜಾರುತ್ತೇನೆ ತಪ್ಪಲ ಕೆಳಗೆ,
ಬುಗ್ಗೆ ಬಿದ್ದೋಡುವೆನು ಕಡಲ ಕರೆಗೆ.

೨

ಹಾಜರಾಗುತ್ತಿದ್ದೆ ಆಗ ಪ್ರತಿ ಹೊತ್ತಾರೆ,
ಹೊಯಿಗೆಗೆರೆ ತುದಿಗೆ ತುದಿಗಾಲ ದಿಗಿಲು
ನಾನಿರಲು, ಕಡಲನೊರೆ ಬಗೆವ ಬಂಗಾರಗೆರೆ
ತೇರ ತುದಿಕಳಶ ಮುನ್ನುಗ್ಗುತಿರಲು ;

ಸಣ್ಣ ಪಾತಿಗೆ ಪುಟ್ಟ ಕೂವೆಗೆ ಪುಟಾಣಿ ಪಟ,
ಹುಟ್ಟಾಡಿಸುತ್ತ ನೀ ತಕ್ಕ ತಕ್ಕ ;
ಸರಳ ರಭಸದ ತರಣಿ ತಾಗಿಸಿ ದಡಕ್ಕೆ, ಗಜಕ್ಕನೆ,
ಮೈ ಕೊಂಕಿ ಕೈಬಾಚಿ ಬಾಚಿ ನನ್ನ.;

ಏಳು ಕಡಲುಗಳ ತೆರೆಯೇರಿ ಕಮರಿಗಳಲ್ಲಿ
ತೇಕಿದೆವು ಹಗಲಿಡೀ ಜೀಕಿ, ಜೀಕಿ ;
ಹೊತ್ತ ಮಳೆಬಿಲ್ಲು ಮಣಿಸರಕುಗಳ ಭಾರಕ್ಕೆ
ಸುಸ್ತಾದ ತರಣಿಗೆ ಕಿನಾರೆ ತಾಗಿ;

ಕತ್ತಲ ಕಡಲ ನಡುವೆ ನಡುಗಡ್ಡೆ ಮನೆಯಲ್ಲಿ
ಇರುಳಿಡೀ ತಳಮುಳುಗು ಬತ್ತಲಾಟ ;
ನಾನು ನೀನಿಡಿಯಾಗಿ ಹೆತ್ತ ಚಿನ್ನದ ತತ್ತಿ
ತತ್ತಿಗೂ ನಿನ್ನದೇ ಮೊಹರು--ಟಂಕ.

ಪ್ರತಿ ನಿಮಿಷವೂ ಮಹಾಜಾತ್ರೆ ; ತೇರಿನ ಮಿಣಿಗೆ
ನನ್ನದೇ ತೋಳು, ನಿನ್ನದೆ ಘೋಷಣೆ.
ಕೋಟಿ ಕೋಟಿಯ ಕಂತ ಬಾಹು ಬಲಕೂ ಮೂಲ
ಬಲ ನನ್ನ, ನಿನ್ನ ಸಂಯೋಗ ಘಟನೆ.

ಆದರೂ ನೀ ದಗಾಖೋರ, ನಾ ಬಲ್ಲೆ : ಹಳ್ಳಿಯ ಶಾಲೆ,
ಮೇಷ್ಟರಿಲ್ಲದ ವೇಳೆ ತಾಳ ಹಿಡಿದು
ನೀ ಭಾಗವತ ಬಾರಿಸಿದೆ ; ನಾನು ಬಲಭೀಮ
ರೌದ್ರಾವತಾರಕ್ಕೆ ರೂಲುದೊಣ್ಣೆ–

ಗದೆಹಿಡಿದು ತಿರುವಿ ಹೂಂಕರಿಸಿದ್ದೆ ; ಇಪ್ಪತ್ತೈದು
ಕುಮ್ಮ್ಮಚಟ್ಟುಗಳು ಮುಗಿವಷ್ಟರೊಳಗೆ
ಹೂಜೆ ಬರಿಹೋಳು ; ತರಗತಿಯ ಭೋರ್ನಗೆ ಹೊಯಿಲು ;
ಬೆನ್ನ ಬಾಸುಂಡೆಯೋ ಮಾಯದ ಕಥೆ.

ಕುಳಿತಿದ್ದೆವಾಗ ಟಕ್ಕಾಟಿಕ್ಕಿಯೆರಡು ಕಡೆ ;
ನಿನ್ನ ಕಡೆಯೇ ಕೊನೆಗು ಕೊಂಚ ಹಗುರ ;
ಆದರೂ ಆಗಾಗ್ಗೆ ಮೈಗೂಡಿ ಸಮತೂಕ
ಒಜ್ಜೆ ಎನಿಸಿರಲಿಲ್ಲ ಇಟ್ಟ ಹೆಜ್ಜೆ.

೩

ಈಗ ಬಂದಿದೆ ಹಣ್ಣು ಬಿದ್ದು ಕೊಳೆಯುವ ಕಾಲ ;
ಹಸುರಿನ ಬುಡಕ್ಕೊರಲೆ ಹಿಡಿವ ಕಾಲ ;
ತೇರ ಹಲಗೆಗೆ ಸುರುಬು ತಗಲಿ, ಮಿಣಿಹುರಿ ಲಡ್ಡು
ಹಿಡಿದು ಹಿಸಿಯುವ ತೇವ ಇಳಿವ ಕಾಲ ;

ತೂಕ ಹೆಚ್ಚುತ್ತಿದೆ ದಿನದಿನಕ್ಕೆ ; ಏತದ ನನ್ನ
ತುದಿ ಮಣ್ಣು ತಿನ್ನುತಿದೆ, ಅತ್ತಕಡೆಗೆ;
ನೀ ಹತ್ತಿ ಕುಳಿತಿದ್ದ ತುದಿ ಅಂತರಾಳಕ್ಕೆ ;
ಚಾಳೀಶ ; ಕಾಣಿಸದು ನಿನ್ನ ಚಹರೆ.

ಕೇಳುವುದು ನಿನ್ನ ಸ್ವರ ನೂರು ದಭದಭೆ ಹಾಗೆ ;
ಕುಳಿತಲ್ಲೆ ಕೊನರುವುವು ನೂರು ಬಿಳಲು :
ಒಣಗುವುವು ಕುಡಿ ಹೊರಗೆ ಗಾಳಿ ತಾಗಿದ ನಿಮಿಷ
ಸೇರಿಕೊಳ್ಳದೆ ನಿನ್ನ ಮೂಲ ಧಾತು.

೪

ಏಳು ಹೊಂಡದ ನೀರು ಕುಡಿದ ಮಂಡೂಕಯ್ಯ
ನಾನು ; ಕುಪ್ಪಳಿಸುವುದೆ ನನ್ನ ಧರ್ಮ ;
ನೆಲದಿಂದ ಕೆಳಕೊಳಕ್ಕೆ, ಮತ್ತೆ ಮೇಲು ನೆಲಕ್ಕೆ ;
ಎರಡಕ್ಕು ತೂಗುವುದು ನನ್ನ ಕೆಲಸ.

ಊದೂದಿ ಏದೇದಿ ನೆಲದೊಳೊದ್ದಾಡಿದೆನು;
ಇನ್ನಾದರೂ ಕೂಪಕಿಳಿವುದೆ ಸರಿ.

ನುಣ್ಣನೆಯ ಕೆಸರ ಬಸಿರಲ್ಲಿ ಹೂತಡಗುವೆನು ;
ಊದಿಳಿದು ಮೈ ತಿಳಿವುದೊಂದೇ ಗುರಿ.

ಗಾಳಿ ಹಗುರಿನ ಚಿನ್ನ ಹಳದಿಮೈ ಜಿಗಿಯುವುದು,
ತಿಳಿನೀರ ಕೊಳದಲ್ಲಿ ಮೇಲೆ ಕೆಳಗೆ;
ದಡದ ಹಸಿಹುಲ್ಲ ಮೇಲೊರಗಿದರೆ ಮೈದಡವಿ
ತರಣಿ ತಬ್ಬುವುದೆ ನಾನುಲಿವ ವೇಳೆ.

ನಾನು ತಿಂದರೆ ಸೊಣವ ತೋಟ ಹುಲುಸಾಗುವುದೆ ?
ಆಯ್ತೆ ಬಾಳಿಗೆ ಮತ್ತೆ ಕಾಯಕಲ್ಪ ?
ನಾ ಮುಳುಗಿದರೆ ತೆಂಗು ಕಂಗಾಲೆ ? ಹಲಸಿಗೆ ಆಲಸೆ ?
ಇದನರಿಯಲೂ ಕಳೆದೆ ಬಹಳ ತೆರಪ !

ನಿನ್ನ ನಗೆಯನ್ನೆ ಮೊಳಗುತ್ತಿರುವ ಮಲ್ಲಿಗೆ,
ನಿನ್ನ ನಲ್ಮೆಯ ನೇಲನೀವ ಮಾವು;
ನಿನ್ನೊಲವನಪ್ಪಿ ತೋರುವ ಕೊಳದ ತಳಕೆಸರು–
ಇಲ್ಲಾಡುವುದು–ಇದೇ ಹೊಸ ಠರಾವು.

# ಶ್ರೀ ರಾಮನವಮಿಯ ದಿವಸ

ಶ್ರೀ ರಾಮನವಮಿಯ ದಿವಸ ರಾಮನಾಮಾಮೃತವೆ
ಪಾನಕ, ಪನಿವಾರ, ಕೋಸಂಬರಿ ;
ಕರಬೂಜ ಸಿದ್ದೋಟುಗಳ ಹೋಳು, ಸೀಕರಣೆ ;
ವ್ಯಕ್ತಮಧ್ಯಕ್ಕೆ ಬಂದುರಿವ ಶಬರಿ.

ಕಾದು ಗಾರಾದ ಮಣ್ಣೊಡಲಿನೊಳಗಡೆಗೆ ಕಿಡಿ–
ಕುಳಿತ ಮೂಲಾಧಾರ ಜೀವಧಾತು
ಮೋಡದ ಸಹಸ್ರಾರದೆಡೆಗೆ ತುಡಿಯುವ ತುರುಸು :
ಮಣ್ಣೊಡೆದು ಹಸುರು ಹೂ ಹುಲ್ಲು ಮುಳ್ಳು.

ಮಣ್ಣುಟ್ಟ ಪುಟ್ಟ ಬಿತ್ತಕ್ಕೆ ಮಳೆಹನಿಸೇಕ :
ಅಶ್ವತ್ಥದ ವಿವರ್ತ ನಿತ್ಯ ಘಟನೆ ;
ಗುಮ್ಮಟಗಿರಿಯ ನೆತ್ತಿಯಲ್ಲಿ ಕಲ್ಲರಳಿದ್ದು
ಕಾರ್ಯಕಾರಣದೊಂದಪೂರ್ವ ನಟನೆ,

ನೆಲಕ್ಕಂಟಿ ಬಿದ್ದ ಆಕಾಶಯಾನದ ಕನಸು
ಜೆಟ್ ವಿಮಾನವನೇರಿ ಕೊಂಚ ದೂರ
ತೇಲಿ ಮಣ್ಣಿಗೆ ಮರಳಿ, ರಾಕೆಟ್ಟು ಜಗಿದುಗುಳಿ
ತಿಂಗಳಿಗೆ ಬಡಿವಾಧುನಿಕ ವಿಕಾರ,

ವೇದೋಪನಿಷದಗಳ ಭೂತಗನ್ನಡಿಯೊಳಗೆ
ಪಡಿಮೂಡಿದಾಕೃತಿಗೆ ತಾನೆ ಮುಗ್ಧ
ಮತ್ಸ್ಯಕೂರ್ಮವರಾಹ ಮೆಟ್ಟಲುಗಳೇರುತ್ತ
ಹುತ್ತಗಟ್ಟಿದ್ದ ಕೈ ಕಡೆದ ನೋಟ :

ಕೌಸಲ್ಯೆದಶರಥರ ಪುತ್ರಕಾಮೇಷ್ಟಿಗೆರೆ
ಹಠಾತ್ತಾಗಿ ತಾಗಿರೆ ತ್ರಿಕಾಲ ಚಕ್ರ,
ಆಸ್ಫೋಟಿಸಿತ್ತು ಸಿಡಿತಲೆ : ಗರಿಷ್ಠ ತೇಜದ ಮೊನೆ
ಕಳಪಟ್ಟು, ಮಣ್ಣುಟ್ಟು ನಿಂತ ಘಟನೆ :
ಬೆಳ್ಳಂಬೆಳಕಿನಲ್ಲಿ ಬಿಳಿಹಾಯಿಗಳ ಪರದಾಟ,
ಹಾಲ್ಗಡಲ ಬಗೆದೊಲೆವ ರಾಜಹಂಸ ;
ಅಂತರಂಗದ ಸುರಳಿ ಬಿಚ್ಚಿ ಸರ್ಚ್‌ಲೈಟಲ್ಲಿ
ಹೆದ್ದಾರಿ ಹಾಸಿದ್ದ ರಾಮಚರಿತ.

ಸಂಕಲ್ಪ ಬಲದ ಜಾಗರಣೆ ; ಕತ್ತಲಿನೆದೆಗೆ
ಕಣೆ ; ದಂಡಕಾರಣ್ಯಕ್ಕೆ ಹಗಲ ದೊಣ್ಣೆ ;
ಮಣ್ಣಿನಣುಗಿಯ ಸೆಳವಿನಲ್ಲಿ ಲಂಕೆಗೆ ಬೆಂಕಿ ;
ಸುಟ್ಟಿಲ್ಲದೇ ಮುಟ್ಟೆನೆಂಬುಡಾಫೆ.

ವಿಜೃಂಭಿಸಿತು ರಾಮಬಾಣ ; ನಿಜ. ಕತ್ತಲಿಗೆ
ಹತ್ತೆ ತಲೆ ? ನೂರಾರೆ ? ಅದು ಅಸಂಖ್ಯ :
ಕತ್ತರಿಸಿದರೆ ಬೆಳೆವ, ಬೆಳೆದು ಕತ್ತಿಗೆ ಬರುವ
ಅನಾದಿ ; ಕೋದಂಡದಂಡವೂ ಹೀಗೆ ದಂಡ ;
ಅಥವಾ ಚಕ್ರಾರಪಂಕ್ತಿ : ಚಕಮುಕಿ ಕಲ್ಲನುಜ್ಜುತ್ತ
ಕೂತುಕೊಂಡಿದ್ದೇನೆ ಕತ್ತಲೊಳಗೆ,
ಪನಿವಾರ ತಿಂದು ಪಾನಕ ಕುಡಿದು ನೋನುತ್ತ
ಸ್ಫೋಟಕ್ಕೆ ಕಾದು ಕಿವಿ ಕಂಪಿಸುತ್ತ.

ಷಟ್ಚಕ್ರ ರಾಕೆಟ್ಟುಗಳ ಹಂತಹಂತಕ್ಕೆ
ಅಂಚೆ ತಲುಪೀತೇ ಸಹಸ್ರಾರಕೆ ?
ಹುತ್ತಗಟ್ಟದೆ ಚಿತ್ತ ಮತ್ತೆ ಕೆತ್ತೀತೇನು
ಪುರುಷೋತ್ತಮನ ಆ ಅಂಥ ರೂಪ-ರೇಖೆ ?

ಮಾರ್ಚ್ : ೧೯೬೮

# ಮೂಲಕ ಮಹಾಶಯರು

೧

ತನ್ನ ಕ್ರೀಡಾಪಟುತ್ವಕ್ಕೆ ಗವಾಸ್ಕರ್ ಚಂದ್ರಶೇಖರ ಇತ್ಯಾದಿ ;
ಸ್ವಪ್ರದರ್ಶನರತಿಗೆ ಖನ್ನಾಖಾನ್ ಅಥವಾ ಬಚ್ಚನ್ ಅಥವಾ ರಾಜ
ಕುಮಾರರೇ ಬಲಿ. ಮಾಡದೆ ಮಾಡಿಸಿ ನೋಡಿ ಉದ್ರೇಕಗೊಳ್ಳುವ ಬಾಬು.;
ಸತ್ತಾದರೂ ಖ್ಯಾತನಾಗುತ್ತೇನೆಂಬ ಬಾಲಿಶ ಹಟಕ್ಕೆ
ತುತ್ತು ದೊಡ್ಡವರೆಲ್ಲ. ಕತ್ತಿನ ಮೇಲೆ ಸ್ವಂತ ತಲೆ ಇದ್ದೂ ಕೂಡ ಬೇಸಿರ್
ಹೆಸರು
ಗಿಟ್ಟಿಸುವ ಕಲ್ಪನೆಯ ಕಾಕು. ಪರಕಾಯ ಪ್ರವೇಶ ಪ್ರವೀಣ ಹೆಣ
ನಿನಗೆ ಸ್ವಂತ ಬದುಕೆಂಬುದೇ ಇಲ್ಲ. ಭಯ
ಬದುಕಿನಲ್ಲಿ ಸಿಕ್ಕಿಕೊಳ್ಳುವುದಕ್ಕೆ, ಕನಸಿನಲ್ಲಿ ಕಂಡ ಶಿಖರದ ಕಡೆ
ಹೆಜ್ಜೆ ಹಾಕುವುದಕ್ಕೆ ಮೂಲಕವೆ ಬದುಕುವಂಥವರು. ಕೃಷ್ಣ, ಬುದ್ಧ, ಜಿನ,
ಬಸವಣ್ಣ, ಯೇಸು, ಗಾಂಧಿ ಯಾರಾದರೂ ಸರಿಯೆ. ಅವರ ಮೂಲಕವೆ
ನೋಂತವರು, ಹುತಾತ್ಮರೂ ಆಗಿ ಕೃತಾರ್ಥರಾಗುವ ಪೈಕಿ ;
ಇದು ಬಹಳ ಹಳೆಯ ಪೈಕಿ ;
ಅತ್ಯಂತ ಆಧುನಿಕ ಕೂಡ—ಹೈಕಿ ? ನೈಕಿ ?

೨

ಜಲಪ್ರಳಯ ಭಯ ನಮ್ಮ ನಿಷ್ಠ ಟೀಕಾಚಾರ್ಯ
ತಟಸ್ಥರಿಗೆ. ಹೊಸ್ತಿಲು ತೊಳೆದ ನೀರಲ್ಲೆ
ಮುಳುಗಿ ಸತ್ತೇನೆಂಬ ಅಭಿಜಾತ ನಯ. ನೆಲ ಸಪಾಟಾಗಿ
ಇದ್ದರೇ ಚೆಂದ ಎಂಬ ಸಮತಾಭಾವ. ಇದ್ದೇ ಇರುವ ಹಳ್ಳಕಮರಿಗಳ
ಆಳ ತಿಳಿಯಲು ಯಾರ ಹೃದಸ ಹಿಡಿದು ಪಂಪು ಹೊಡೆಯಲಿ ಎಂಬ
ಜಿಜ್ಞಾಸೆ. ಹುಡುಗ ನೀರಿಗೆ ಬಿದ್ದು ಒದ್ದಾಡುತಿರಲಹಾ

ಪರಮ ಸಂತೋಷ ತಾನೇ ಅಲ್ಲಿ ಗುದ್ದಾಡುತಿರುವಂತೆ.   ಆ ಅವನು
ತಾನಲ್ಲ ತನ್ನ ಮಗನೂ ಅಲ್ಲ ಎಂಬ ಅಂತಃಸ್ಫುರಣೆ. ಮುಳುಗಿದರೆ
ಸಚ್ಚಿದಾನಂದ. ಮುಳುಗದೇ ಒಂದೆರಡು ಗುಟುಕು ನೀರು ಕುಡಿದೆದ್ದನೇ
ಆಹಹಾ ಮಾನವನ ಮೂಲಭೂತ ಸಾಹಸಕ್ಕುದಾಹರಣೆ
ಸಿಕ್ಕಿ ಎದೆಯುಕ್ಕಂದ. ಕೆಲವು ಸಲ ಜೀವಕಾರುಣ್ಯ ತಡಕೊಳ್ಳಲಾರದೇ
ಕತ್ತಿ ದೊಣ್ಣೆ ಕಠಾರಿ ಹಿಡಿದು ಮತ್ತೂ ಮತ್ತು
ತಳ್ಳಿ ನೀರಿಗೆ ಪ್ರಾಣಕ್ಕಂಟಿಕೊಂಡಿಸಮ್ಮೊ ತಾವೇ ಎಂಬ ಪರವಶತೆ.
ಸತ್ತರೆ ಸಫಲತೆಯ ಸಂತೃಪ್ತಿ ;
ಶ್ರದ್ಧಾಂಜಲಿಯ ಕೊಡುಗೆ, ಶೋಕೋತ್ಸವಾಚರಣೆ, ಸ್ಮಾರಕ ರಚನೆ.
ಸ್ಫೂರ್ತಿ ಬಂದರೆ ಪದ್ಯ ಗೀಚಿಯೂ ಬಿಟ್ಟಾರು. ಇಲ್ಲವಾದರೂ
ಮನುಷ್ಯ ಸಾಯಲಿಕ್ಕೂ ಹೆದರಲಾರ ಎಂಬೀ ಸನಾತನ ಸತ್ಯ
ಸಾರಿ ಚಪ್ಪಾಳೆ ತಟ್ಟಿ ಕುಪ್ಪಳಿಸಿ ಉತ್ಸವ ನಡೆಸಿ ಉಪ್ಪರಿಗೆ
ಕಟಾಂಜನಕ್ಕಾತು ಕುಳಿತು ಸೇದುತ್ತಾರೆ ಸಿಗರೇಟು ಗರಂಆಗಿ ಒಳಗೂ ಹೊರಗು.

೩

ಕೆಲಸ ಬಿಟ್ಟರೆ ಶಹಬ್ಬಾಸ್ ! ಹೊಟ್ಟೆಗೆ ತಣ್ಣೀರು ಬಟ್ಟೆ
ಕಟ್ಟಿ ಕೈಕಟ್ಟಿ ಕುಳಿತನೆ ವ್ಹಾರೆವಾ ! 'ಮೇರೆ ಸರದಾರ್' ! ಬದುಕು
ಹುಡುಕಿ ಹೊರಟನೇ ಕೆಟ್ಟ ! 'ಛೇ, ಛೇ, ಉಂಟೆ, ಉಂಟೆ ? ' ನಮ್ಮಾದರ್ಶ
ಚಿತ್ರ ಮಸುಕಾಗಬಹುದೇ ಹೀಗೆ ? ಈ ಅಸಾಮಾನ್ಯ ಈ ರೀತಿ
ಕೆಲಸಕ್ಕೆ ಕೈ ಹಚ್ಚಿ ಕೈಕೊಟ್ಟನಲ್ಲಾ ನಮಗೆ. ಹೇಳಿ ಹೇಳಿ ಇಂಥವನು
ಉಪ್ಪುಖಾರಕ್ಕೆ ಸೊಪ್ಪು ಹಾಕಬಹುದೇ ? ಪ್ರಾಣಕ್ಕಂಟಿ
ಕೊಳ್ಳಬಹುದೇ ಇಂಥಜನ ಇಲ್ಲಿ ಈ ನಮ್ಮನಷ್ಟು ಬಿಟ್ಟು ?

ನೋಡಿ, ನೋಡಿ ಹೇಗೆ ವಾಲುತ್ತಾನೆ ; ನೆಲಕ್ಕೆ ತೊಂಭತ್ತು
ಡಿಗ್ರಿಯಷ್ಟೇ ನೇರ ತಲೆಮೇಲೆ ನಮ್ಮಾಕಾಂಕ್ಷೆ ಕರಗ ಹೊತ್ತ ಇಸಮ್ಮೊ
ಮುನ್ನುಗ್ಗುವುದ ಬಿಟ್ಟು ಹೇಗೆ ವಾಲಿದ ನೋಡಿ , ಅರ್ಧ ಡಿಗ್ರಿ,
ಅಯ್ಯೋ ಅಲ್ಲ,
ಮುಕ್ಕಾಲು ; ಅಲ್ಲದೇ, ನೋಡಿ ಈ ಇವನ ಆ ಆದರ್ಶ ಕೈ

ಕೆರಕೊಳ್ಳಬಹುದೆ ಬೆನ್ನ, ತೊಡೆಸಂದಿಯ ? ಏಕೆ ಈ ರೀತಿ
ತಡವರಿಸುವುದು, ಮುಗ್ಗರಿಸುವುದು ? ಕೋಲುನಡಿಗೆ ಅದೆಷ್ಟು ಸುಲಭ !
ಇಷ್ಟಕ್ಕೂ ಅವನಿಗೇನಿದೆ ಚಿಂತೆ ?
ನಮಗೊ ದೇಶದ ಚಿಂತೆ, ನಮ್ಮ ರಾಜ್ಯದ ಚಿಂತೆ, ಸಮಾಜವಾದದ ಚಿಂತೆ ;
ಎಲ್ಲಕ್ಕಿಂತ ಹೆಚ್ಚಾಗಿ ದುರ್ಬೀನು ಹಿಡಿದು ಈ ಇಂಥವರ ನೋಡುವ ಚಿಂತೆ ;
ಅದಕ್ಕೂ ಹೆಚ್ಚು ನಮ್ಮ ಕೆಲಸದ ಚಿಂತೆ, ಮೊದಲನೆಯ ತಾರೀಖು
ತರುವ ಸಂಬಳದ ಚಿಂತೆ, ಅದು ಸಾಲದ ಚಿಂತೆ, ಸಾಲದ ಚಿಂತೆ ;
ಆಗಾಗ ದಕ್ಕಬಹುದಾದ ಗಿಂಬಳದ, ಆಗಬಹುದಾದ
ವರ್ಗದ, ದೊರೆಯಬಹುದಾದ ಭಡ್ತಿಯ ಚಿಂತೆ ; ಹೆಂಡತಿಗೆ
ಹೊಸ ಸೀರೆ, ಮಕ್ಕಳಿಗೆ ಹೊಸಬಟ್ಟೆ, ವಾರಕ್ಕೊಂದು ಸಲವಾದರೂ ಸಿನೆಮ,
ಅಯ್ಯಯ್ಯೊ, ಒಂದೆ ಎರಡೆ ?

೪

ಪರಿಪೂರ್ಣತೆಯ ಕನಸು ಮಾನವತ್ವದ ಮೂಲ. ಬೇರಿಗೆ ನೀರು
ಬಿದ್ದರೆ ಫಲವತ್ತಾದ ಮಣ್ಣು ದೊರೆತರೆ ಪ್ರತಿಯೊಂದು ಮರಗಿಡವು
ತನ ತನಗೆ ತಕ್ಕಂತೆ ಬೆಳೆಯುವುದು. ಪರಿಪಕ್ವತೆಯ ವರ
ಕೆಲವಕ್ಕೆ ಮಾತ್ರ. ಏನಾದರೊಂದಷ್ಟು
ಹುಳುಕಿರುವುದೇ ಮಾನವತೆಯ ಹಣೆಬರಹ.
ಸೂಕ್ಷ್ಮದರ್ಶಕದ ಅತಿಸೂಕ್ಷ್ಮ ದೃಷ್ಟಿಯ ಪರಮಾಣು ಜೀವಿಗಳ
ನರ್ತನವಲ್ಲ.
ಒಟ್ಟಾರೆಯ ಮಾತು ಎಲ್ಲ ; ರಂಧ್ರಾನ್ವೇಷಣ ಚತುರನೇ, ಕೇಳು
ಕನ್ನಡಿಯ ಮುಂದೆ ಒಂದು ಕ್ಷಣವಾದರೂ ನಿಲ್ಲು :

ಕಸುಗಾಯಿಗಳೆ ಎಲ್ಲ. ಹುಳಿ ಕೂಡ ಕಡಿಮೆ ;
ಬರಿಯ ಒಗಚೇ ಹೆಚ್ಚು. ಕೆಲವು ಬರಿ ಹೀಚಾಗಿ ಒಣಗಿ
ಬಿದ್ದು ಧೂಳಾಗುವುವು. ಕೆಲವೇ ಮಾತ್ರ ಹಣ್ಣಾಗಿ
ಕಳಚಿಕೊಳ್ಳುವುವು. ಅವುಗಳಲ್ಲೂ ಮತ್ತೆ
ಒಂದೊಂದಕೊಂದೊಂದು ರುಚಿ. ನಿನಗೆ ಬೇಕಾದಂತೆ ಮಾಗಬೇಕಾದದ್ದು

ನೀನೆ; ನಿನ್ನ ಮೂಲಸತ್ವದ ಮಾತು ಆದು. ನಿನ್ನ ತೃಪ್ತಿಗೆ ನಾನು
ಮಾಗಬೇಕಾದ್ದಿಲ್ಲ, ಮಾಗಿದ್ದಕ್ಕೂ ಹುಳಿ ಕೊಂಚ ಎಂದು ಹಾಗಲಕಾಯಿ
ಲೊಚಗುಟ್ಟಬೇಕಾದ್ದಿಲ್ಲ. ಪಡುವಲಕಾಯಿ
ಸಿಹಿಯೂ ಅಲ್ಲ, ಕಹಿಯೂ ಅಲ್ಲ. ಮೇಲು ಮೇಲಕ್ಕೆ ನೇರಕ್ಕೆ ಬೆಳೆಯುವ ತ್ಯಾಗಕ್ಕೂ
ಅಲ್ಲಲ್ಲಿ ತೂತು, ಸಣ್ಣ ಸಣ್ಣ ಪೊಟ್ಟರೆ ಹುಳುಕು ಮೈಮೇಲೆ ;
ಹಾಗಿದ್ದರೂ ಕೂಡ ಪ್ರೌಢವಾದಂಥಾದ್ದು
ಕಿಟಕಿಯಾಗುತ್ತದೆ, ಬಾಗಿಲಾಗುತ್ತದೆ, ಮಂಚವಾಗುತ್ತದೆ, ಮಚ್ಚಾಗುತ್ತದೆ; ಅದಕ್ಕೆ
ಹೂವು ಕಂಡವರಿಲ್ಲ. ಹಣ್ಣಂತು ದೊರೆವುದೆ ಇಲ್ಲ.

—ಜೂನ್ ೧೯೭೯

# ನಿನ್ನ ಗದ್ದೆಗೆ ನೀರು

೧

ನಿನ್ನ ಗದ್ದೆಗೆ ನೀರು ತರುವ ನಾಲೆಗಳೆಲ್ಲ
ಬಂದು. ಬೇಕಾದದ್ದು ಬೆಳೆದುಕೋ ಬಂಧು :
ಕಲೆ ಧರ್ಮ ನ್ಯಾಯ ಕಾನೂನು ಸ್ವಾತಂತ್ರ್ಯ ಇತ್ಯಾದಿ ಮೂಲವ್ಯಾಧಿ,
ನನ್ನ ಕುರ್ಚಿಗೆ ತಕ್ಕ ಗಾದಿ.
ಮುಖ್ಯವಾದ ಮಾತೆಂದರೆ ಓ ಭಾರತ ಸಂಸ್ಕೃತಿಯ ಮುಖ್ಯ ಪ್ರಾಣ,
ಬಾಲವಾಡಿಸಬಾರದು, ಹಲ್ಲು ಕಿರಿಯಬಾರದು,
ಹುಬ್ಬೇರಿಸುವುದಂತೂ ಬಹಳ ದೊಡ್ಡ ಗುನ್ಹೆ,
ಹಿಂದಿನ ಪಾಷಂಡನ, ಇಂದಿನ ಫ್ಯಾಸಿಸ್ಟನ ಚಿಹ್ನೆ ;
ತಾಳಲಯಕ್ಕೆ ಸರಿ ಲಾಗ ಹಾಕುವುದೆ ಲಾಗಾಯ್ತಿನ ಹಿರಿಮೆ.

೨

ಬೆನ್ನೂಳೆ ಮುರಿದು ಬಳಿಕ ಬಡಕೊಳ್ಳುತ್ತೇನೆ ಬಾನುಲಿ :
ಎರಡು ಕಾಲಿನ ಮೇಲೆ ನಿಲ್ಲಲೇ ಬೇಕೆಂಬ ತೊದಲುಲಿ
ಜನತಾ ವಿರೋಧಿದಳಗಳ ಪಿತೂರಿ,
ಕಾನೂನು ಮನ್ನಿಸುವ ಜನ ನಾಲ್ಕೂ ಕಾಲಲ್ಲಿ ನಡೆದರೇ
ಚಂದ, ಬೀಳುವಪಾಯ ಕಮ್ಮಿ :
ಸರ್ವದಾ ಸಾಷ್ಟಾಂಗ ಪ್ರಣಾಮದ್ದೆ ಭಂಗಿ.

೩

ಹೇಳಿದ ಹಾಗೆ ಕೇಳಿ ಬಾಲ
ಮುದುರಿ ಕುಳಿತರೇನೇ ಲಾಭ :
ಹೊಟ್ಟೆಗಷ್ಟು ಹಿಟ್ಟು ಜುಟ್ಟಿಗೆ ಪ್ಲಾಸ್ಟಿಕ್ ಮಲ್ಲಿಗೆ
ಸಿಗುತ್ತವೆ ಹೆದರಬೇಡಿ ನಾಳೆಗೆ.

ಅರ್ಜಿ ಹೋಗಿ ಸೇರುತ್ತದೆ ಖಂಡಿತಾ ಫೈಲಿಗೆ,
ಸ್ವಾತಂತ್ರ್ಯೋತ್ಸವಕ್ಕೆ ತಲಾ ಒಂದು ಬೂಂದಿ ಕಾಳಿಗೆ ;
ಸರ್ವಾರ್ಪಣ ಕಲಿಯುವುದೆ ಹೀಗೆ ತಾಯಿ ಮಹಾಂಕಾಳಿಗೆ.

೪

ಕೈಗಿಂತ ಲಾಠಿ ದೊಡ್ಡದು, ಲಾಠಿಗಿಂತ ಕತ್ತಿ,
ಅದಕ್ಕಿಂತ ಬಿಲ್ಲು ಬಾಣ,
ಬಾಣಕ್ಕಿಂತಲು ದೊಡ್ಡದಲ್ಲವೇ ಜೋಡುನಳಿಗೆ ಬಂದೂಕು,
ಅದನ್ನು ಕೊಳ್ಳುವ ತಾಖತ್ತು ?
ದುಡ್ಡೆಂದರೆ ಬಲ, ಬಲವೆಂದರೆ ದುಡ್ಡು ;
ಈ ಎರಡೂ ಇದ್ದರೆ ಬಿಡು, ಸ್ವರ್ಗವ ಕಿತ್ತು ಬಿಸಾಡು.
ಆದರೂ ಇದನ್ನು ಮರೆವುದಪಾಯ :
ಬಲವೆಂದರೆ ಎಡ,
ಎಡವೆಂದರೂ ಎಡ–
ಇದು ಈ ಕಾಲದ ಗೂಢ.
ಆ ಎರಡೂ ಇಲ್ಲದ ಕುರಿ
ತೋದಿದ ಬೀದಿ ಭಿಕಾರಿ,
ಮುಚ್ಚಿಕೊಂಡು ನೀ ಬಿದ್ದಿರು ಮೂಲೆ,
ಕಲಿ ತಟ್ಟಲು ಚಪ್ಪಾಳೆ.

೫

ದೊಂಬಿ ಗಲಾಟೆ ಚಳುವಳಿ ಹಿಂಸೆಗೆ
ಯೋಗಸಾಧನೆಯೆ ಮದ್ದು.
ಆಸನ ಹಾಕುವ ಆಚಾರ್ಯರಿಗೆ
ಕರೆ ಹೋಗಿದೆ ಖುದ್ದು :
'ಜನಸಾಮಾನ್ಯರೂ ಯೋಗಾಸನವೂ' ಎಂಬ ವಿಚಾರದ ಮೇಲೆ

ನಡೆಯಿತು ಹಿರಿ ಪರಿಷತ್ತು.
ನಿರ್ಣಯವಾಯಿತು ಶವಾಸನವೆ ಸರಿ
ಸುಲಭ ಸುಗಮ ಹಿತಕಾರಿ.
ತಡವೇತಕೆ ನಡೆಯಿರಿ ಕೈಕಾಲ
ಚಾಚಿ ಮಲಗಿರಿ ಅಂಗತ್ತು ;
ನರಮಂಡಲ ಸಡಲಿಸಿ ಆರಾಮು
ಮುಚ್ಚಿ ಕಣ್ಣ ಕಿಂಚಿತ್ತು :
ಉಸಿರು ನಿಧಾನ, ಮಾತೃಧ್ಯಾನ
ಜೀವನ್ಮೃತನ ವಿಧಾನ,

—ಮಾರ್ಚ್ ೧೯೭೬

# ಸಾಮಾನ್ಯನಂತೆ ಈ ನಾನು !

ಸಾಮಾನ್ಯನಂತೆ ಈ ನಾನು ! ನಿಮ್ಮಪ್ಪ
ಸಾಮಾನ್ಯ : ನಮ್ಮಪ್ಪ, ನಮ್ಮಜ್ಜ, ಆ ಎಲ್ಲ
ಸತ್ತವರ ಹಂತೀಲಿ. ಎಲೆಲೇ ನನ್ನ
ಹೆಸರೇನು ಹೇಳು ನೋಡೋವ. ಈ ಚಹರೆ, ಈ ನಿಲುವು, ಈ
ಮನಸ್ಸಿನ ರೆಪೆ
ಯಿರದ ದೇವರ ಕಣ್ಣು ನಿಮ್ಮಪ್ಪಂದೆ ? ದೂರದಲ್ಲಿ ಸಮಶೀತೋಷ್ಣ
ಕೋಣೆಯೊಳಗಡೆ ಹೆಸರು ಕುಲಗೋತ್ರ ತಿಳಿಯದೆ ಸಲೀಸು
ಸಾಧಾರಣೀಕರಣ ಕ್ರಿಯಾಕರ್ಮ ಮುಗಿಸಿ ಕುಂತಲ್ಲಿಯೇ
ಬೊಜ್ಜದೊಡೆ ಮೆಲ್ಲುತ್ತ ಕವಳ ಜಗಿಯುವ ಮಹಾ
ಧನುಸ್ಸಿನವನೆ, ಹುಮ್ಮಸ್ಸಿದೆಯೆ, ಬಾ ಈಚೆ ಕಡೆ
ತೋರಿಸುತ್ತೇನೊಂದು ಕೈಯ, ಈ ಸಾಮುದ್ರಿಕವ, ಮುದ್ರಿಕೆಯ,
ಈ ಒಡಕು ಲಾಟೀನೊಳಗೆ ಕರಕು ಬತ್ತಿಯನೆತ್ತಿ ಹೊತ್ತಿ
ಉರಿವ ದೀಪದ ಕಾವ.

ಹೂಹಣ್ಣು ತಳೆದ ಮರ ಮರೆತು ಸೆಟೆದು ನಿಂತಿರುವ ಕೊಡಲಿಯ ಕಾವೆ
ನಿನಗೆಲ್ಲ ಒಂದೆ : ಮಂದಿ ಎಂದರೆ ಮಂದೆ, ಮಂದೆ ಎಂದರೆ ಕುರಿ,ಕುರಿ,ಎಂದರೆ
ತರಕಾರಿ. ಹೆಸರು ಹಿಡಿದು ಕೂಗಿ ಹಿಡಿಹುಲ್ಲು
ನೀಡಿ ಮೈಸವರಿ ಸವಿನುಡಿಯುವ ಕ್ರಿಯಾವಂತಿಕೆ
ನಿನಗೆಲ್ಲಿ ? ನಂಬರು ಹಾಕಿ ಟ್ರಕ್ಕಿಗೆ ತುಂಬಿ
ಕಸಾಯಿಖಾನೆ ಡಬ್ಬಿಗೆಲ್ಲ ಒಂದೇ ಹೆಸರು
ಪಟ್ಟಿಯಂಟಿಸುವ, ಟಿನ್ನುಗಳಲ್ಲಿ ಮಾತ್ರವೆ ನನ್ನ
ರುಚಿ ನೋಡುವುದ್ದೇಶವುಳ್ಳ ಸಮವಸ್ತ್ರ ಪ್ರವಾದಿಯೇ ನಿನ್ನ
ಮುಖವೆಲ್ಲಿ ? ರೊಟ್ಟಿ ತುಣಕಿಗೆ ಮುಖ ಮೂಗು
ಕೆತ್ತಿಸಿಕೊಂಡ ಬೇವಾರ್ಸಿ, ಬಾಲ ಕಳೆದುಕೊಂಡ ನರಿಯೇ, ನಿನಗೆ
ವೈವಿಧ್ಯವೇ ಹುಳಿ. ಇಂಚು ಪಟ್ಟಿ ಹತ್ತರಿ ಹಿಡಿದು

ಸಾಮಾನ್ಯಕ್ಕೆ ಹತ್ತ ಕೆತ್ತುವಾಚಾರಿ, ಸಲ್ಲುವ ಕಾಳ
ದಕ್ಷಿಣೆ ಹಣದ ಝುಣತ್ಕಾರದ ನಿರಾಕಾರ ಪೂಜಕನೆ, ನಿನ್ನ ಎದೆಗೂಡಲ್ಲಿ
ಇಟ್ಟ ಯಂತ್ರಕ್ಕೇನು ಹೆಸರು ? ಉಸುರೋ ಉಸುರು.

ಉಸುರು ಇದ್ದದ್ದು ಪ್ರತಿಯೊಂದಕ್ಕು ಇತಿಹಾಸ
ಬೇರೆ, ಹಾಸ ಬೇರೆ, ವಿಕಾಸ ವಿಲಾಸ ಬೇರೆ, ಗುರಿಪಾಶ
ಬೇರೆ. ನಿನ್ನ ನಕಾಶೆಗೆ ಸಿಕ್ಕದೇ ನುಣುಚಿ, ತನ್ನ ಜೀವಪತಾಕೆ
ಎತ್ತಿ ಎತ್ತಿ ಕಾದಾಡುವುದು ಪ್ರತ್ಯೇಕತೆಯ
ಬೆಳಕಿನುಪ್ಪರಿಗೆ ಕಟ್ಟುತ್ತ, ಕಟ್ಟುತ್ತ–ಕೊನೆವರೆಗೆ.
ನಾನಿದ್ದೇನು ತುರಿ ಕಜ್ಜಿ ಮೈಯ ಹರಕಂಗಿ ರೈತ ಭಾಗವತ ;
ಅಥವಾ ಮಸಿ ಹತ್ತಿ ಮೆತ್ತಿ ಕುಸಿಯುತ್ತಿರುವ ಕಾರ್ಖಾನೆಯವಧೂತ ;
ಅಥವಾ ಒಗ್ಗಾಲಿನಲ್ಲಿ ನುಗ್ಗಿ ಬಗ್ಗಿ ನೆಗ್ಗಿ ಕುಂಟುತ್ತ ಮುಂದೊತ್ತಿ
ಬರುವ ಬೀದಿ ಭಿಕಾರಿ.

ಸಾಮಾನ್ಯನೆಂದೆಯ ? ತಪ್ಪು. ತಿಳಿದಿರು ಜೋಕೆ :
ಬೇಡಿಗೆ ಕೈಯೊಡ್ಡದವ, ಕತ್ತಿಗೆ ಇಕ್ಕಿದುರುಳನ್ನೆ
ಕಚ್ಚುತ್ತ ಕಡಿಯುತ್ತ ಸಿಗಿಯುತ್ತ ಅಗೆಯುತ್ತ
ಬಗೆಯುತ್ತಲೇ ಕಣ್ಣ ಮುಚ್ಚುವವ, ' ತಾಳಕ್ಕೆ ಸರಿ ಹೆಜ್ಜೆ '
ಹೂಂಕರಿಸುತ್ತಲಿದ್ದರೂ ನಿನ್ನ ಪಿಸ್ತೂಲು
ಮನಸ್ಸಿನಲ್ಲೇ ಬೇರೆ ತಾಳ ಲಯ ನಿಭಾಯಿಸುವ
ಹುಟ್ಟಾ ಸ್ವತಂತ್ರ ಪರಮಾಣುದೇಹಿ.

ಮುಖ ಕೆತ್ತಿಸಿಕೊಂಡ ಸಾಮಾನ್ಯದ ಪೂಜಾರಿಯೇ,
ನೀ ತೊಟ್ಟ ಮುಖವಾಡ ಹಿರಣ್ಯಾಕ್ಷನದು. ಚಾಪೆ ಸುತ್ತಿ ನೆಲ
ಕಂಕುಳಲ್ಲಿಟ್ಟು ಕುರ್ಚಿಯ ಕಚ್ಚಿ ಅಂಟಿಕೊಳ್ಳುವ ಹುನಾರು
ನಿನಗೆ—ಮುಖವುಳ್ಳವರ ಮೂತಿ ಕೆತ್ತಿ ಅಥವಾ ದೊಡ್ಡಿಯಲ್ಲಿಟ್ಟು
ಅಗಗೊ, ದಾಡಿ ಮಸೆವ ವರಾಹ ಕಣ್ಣ ಮಿಟುಕದೆ ದಿಟ್ಟಿ.
ಸುತ್ತ ಇದೆ ಗಡಿಯಾರ ಮುಖವ. ಕಂಭದೊಳಕ್ಕೆ
ಸಿಕ್ಕಿಬಿದ್ದಣು ನಾನು ನರಸಿಂಹ. ಕಾಯುತ್ತೇನೆ–
ನಾನು ಕೂಡ.

—ಮೇ ೧೯೭೬.

# ನಮ್ಮ ಸದಾಶಿವ

೧

ನಮ್ಮ ಸದಾಶಿವ, ಕತೆಗಾರ ತಮ್ಮ ಸದಾಶಿವ
ಇಲ್ಲಿ ಇನ್ನಿಲ್ಲ. ಸ್ಟೇಶನ್ನು ಬಂತು. ಇಳಿದ. ಹೊರಟಿತು ರೈಲು ;
ಹಿಂದಿರುಗಲೇ ಇಲ್ಲ.

ಯಾರಿಗೆ ಯಾವ ಸ್ಟೇಶನ್ನು ? ಇಳಿಯುವುದು ಯಾವಾಗ ?
ರೈಲು ತಪ್ಪಿತಲ್ಲಾ ಎಂದು ಮರುಗುವನೆ ? ಅಥವಾ
ನಮ್ಮ ಸಹವಾಸವೂ ಸದ್ಯ ತಪ್ಪಿತಲ್ಲಾ ಎಂದು ;
ಕಿಕ್ಕಿರಿದ ಡಬ್ಬಿ, ಕೈಕಾಲಾಡಿಸಲು ತಕ್ಕ
ಅವಕಾಶವಿಲ್ಲ ; ಗಬ್ಬುವಾಸನೆ, ಪಕ್ಕದವರಾತ್ಮಕಥನಗಳ ಅತಿ
ರಂಜಿತದ ಹೊಟ್ಟುಕುಟ್ಟುವ ಸದ್ದು ; ಅಪರಂಜಿ
ತುಂಡು ತಾನೇ ಎಂಬ ತುಕ್ಕುತಿಂದ ಕಬ್ಬಿಣದ ನಿರಂತರ ತೇಗು–ಈ ಎಲ್ಲ
ಮುಗಿಯಿತಲ್ಲಾ ಎಂದು ; ಗಿಡ ಬಳ್ಳಿ ಮರ, ಮುಗುಳು, ಹೊಸ ಮರಳು,
ಹೊಸ ನೀಳು, ತಾವರೆಕೆರೆಯ ನಡುವೆ, ಮುಗಿಲ ಹತ್ತಿರ ರಾತ್ರಿ
ತಾರೆಗಳ ಅಕ್ಕಪಕ್ಕ, ಸಿಕ್ಕಸಿಕ್ಕಲ್ಲಿ ಮೃದುವಾದ್ದು, ಸುಗಂಧ
ಭರಿತವಾದದ್ದು ತಕ್ಕತಕ್ಕ ನಿಶ್ಶಂಕ ತೇಲಾಡಬಹುದೆಂದು, ಕಕ್ಕಾವಿಕ್ಕಿ
ಕುಕ್ಕಿಸಬೇಕಾಗಿಲ್ಲ ಮುಖಭಂಗಕ್ಕೆ, ತೇಜೋವಧೆಗೆ–
ಎಂದು ಹಾಯಾಗಿಳುವನೇ ?

ಕಥೆ ಬರೆದನಂತೆ–ಕತೆಯೇನು ಮಣ್ಣು–ತನ್ನೆದೆಯ
ಖಂಡ ಖಂಡ ಕತ್ತರಿಸಿ ಕಿತ್ತು ಹಿಡಿದು ಹಿಂಡಿ ಹಿಂಡಿ
ಭಟ್ಟಿಯಿಳಿಸಿದ ತೊಟ್ಟು ತೊಟ್ಟು
ನಾಗಾಲೋಟದಲ್ಲು ಅಲ್ಲಲ್ಲಿ ತಡೆತಡೆದು ಕಿತ್ತಿರುವ ತಳದ ಗುಟ್ಟು.

ತಬ್ಬಲಿಯ ತಳ್ಳಂಕಕ್ಕೆ ಎಷ್ಟಂಕ ? ಓಗೊಟ್ಟು

ಕೈಂಕರ್ಯಕ್ಕೆ ಸಿದ್ಧವಾಗುತ್ತಿತ್ತು ಮಾತು. ಮಾತಿನ ಸಂಕ
ಕಟ್ಟುತ್ತಲೇ ಇದ್ದ ತಿಳಿದದ್ದರಿಂದ ಹೊಳೆದದ್ದಕ್ಕೆ.
ಸಿಗ್ನಲ್ ಬೀಳದೆಯೇ ಹೀಗೆ ಮಧ್ಯದಲ್ಲೇ ಕೊನೆ ಪರದೆ
ಬಿದ್ದು ದೀಪಗಳಾರಿ ಕಾಲೂರಿ ನಿಂತ ಕತ್ತಲು. ಖಾಲಿ ಖಾಲಿ
ರಂಗಸ್ಥಳ. ತನ್ನದೆಲ್ಲವೂ ನಿಜ. ಉಳಿದದ್ದೆಲ್ಲ ನಾಟಕ.
ಪ್ರತಿಸ್ಪಂದ ಸ್ಪಂದವೇ ? ರೈಲಿಗೆ ಸಿಕ್ಕಿ ಕತ್ತರಿಸಿ ಬಿದ್ದವನ ತಲೆ
ತುಂಡು. ದೂರದಿ ನಿಂತು ಕಣ್ಣೀರು ಕರೆದವನ ತಲೆ
ಯಥಾ ಪ್ರಕಾರ. ಸಹಾನುಭೂತಿಯ ಬಡಿಯು. ಇಡಿಯಾಗಿ
ಹಿಡಿದು ಬಡಿದು ಮೂಡಿಸಬಲ್ಲೆವೇನು ಆ ಆಕಾರ
ದಲ್ಲಿ ಆ ನಿರಾಕಾರ ಜಂಗಮ ಚುರುಕ ? ಮಾತುಗಳಾಚೆ
ಯಾತನೆಗೆ ಅರ್ಥ ಹುಡುಕುತ್ತ ಪರದಾಡಿದವ ಅಂತೂ ಕೊನೆಗೆ
ನಡದೇ ಬಿಟ್ಟ, ಬರೀ ಅರ್ಥ ತುಂಬಿ ಸೂಸುವ ಕರೆಗೆ.

೨

ಹುಟ್ಟುವಾಗಲೆ ಶಿಲುಬೆ ಹೊತ್ತು ಬಂದಿದ್ದವನೆ
ಹೋಗಿಯೇ ಬಿಟ್ಟ. ಮರ್ಮಸ್ಥಳವ ಹುಡುಕಿ ಹುಡುಕಿ ಮೊಳೆ
ಜಡಿಯುತ್ತಲೇ ಇತ್ತು ಕೊನೆವರೆಗೆ. ಬಾಯಾರಿಕೆಗೆ
ನಲ್ಲಿಯಲ್ಲಿ ನೀರು ಬಂದೀತೆಂದು ಕಾದು ಕಾದು ಕುಡಿದದ್ದು ಕೊನೆಗೂ ಬೆಂಕಿ
ರಸವ. ಸರ್ವಹುತದ ಕೊನೆಯ ಸಮಿತ್ತೀಗ
ಉರಿದು ಹೋಗಿದೆ. ಬೆಳ್ಳಿ ಲೋಟವ ಹಿಡಿದು ಬಳಕುತ್ತ ಬಂದವಳು
ಮೇರಿ ಮಗ್ದಾಲೀನಳೇನೂ ಅಲ್ಲ. ತಂದದ್ದುಪ್ಪು ನೀರು,
ಎರೆದದ್ದು ಗಾಯಕ್ಕೆ. ಪ್ರೀತಿ ಅನುಕಂಪ ಸಹಾನುಭೂತಿಗಳ ಸುತ್ತಿಗೆ
ಬಡಿಯುತ್ತಲೇ ಬಂತು. ವಿಹ್ವಲ ಹುಡುಗ,
ಅಪರಿಚಿತರೇ ಇಲ್ಲಿ ಎಲ್ಲ. ಎದೆಗವಚಿ
ಹಿಡಿದುಕೊಂಡವರು, ತೊಡೆಮೇಲಿಟ್ಟು ಅಳ್ಳಳ್ಳಾಯಿ
ಜಪಿಸಿದಂಥವರು, ಪಕ್ಕಕ್ಕೆ ಮಲಗಿದ್ದು ಎದ್ದವರು, ಬಾರುಗಳಲ್ಲಿ

ಬೀರು ಹೀರುತ್ತ ಜೊತೆ ಜೊತೆಯಾಗಿ ಸತ್ತವರು–
ಒಬ್ಬೊಬ್ಬರೂ ಒಂದಭೇದ್ಯ ಕೊತ್ತಳ :
ಕತ್ತಿಗುರಾಣಿ ಹಿಡಿದು ನಿಂತವರು,
ತಮ್ಮ ಗುಂಗಿಗೆ ತಾವೆ ದಂಗಾಗಿ ಜಂಗು ಹತ್ತಿ ಕೆಡೆದಂಥವರು.
ಯುದ್ಧವಿದ್ಯೆಗೆ ಹೇಸಿ ಪ್ರಬುದ್ಧನಾದರೆ ಹೀಗೆ :
ಚಿಕ್ಕ ಮಗುವಿಗೆ ಹಕ್ಕೆ ದಿಡ್ಡಿಹೊರಗೆ.

೩

ವಿದ್ಯಾರ್ಥಿ, ಸಹೋದ್ಯೋಗಿ, ಸ್ನೇಹಿತ, ಸದಾಶಿವ ನಿನ್ನ
ಉಕ್ಕು ನಡೆ, ಅಪರಂಜಿ ಹೃದಯ, ತತ್ತ್ವ
ನಿಷ್ಠ ಬದುಕಿಗೆ ನಮಸ್ಕಾರ. ನಾವೇನ
ನೀಡಬಲ್ಲೆವು ನಿನಗೆ ಹುಟ್ಟುವಾಗಲೆ ದಖಲ್‌ಪಟ್ಟಿ ಕಟ್ಟಿಕೊಂಡಂಥವರು,
ಇಂದು ನಾಳೆಯ ಸರಳಸೆರೆ ಕಂಬಿಗಳ ಮೇಲೆ ಸಾಗುವವರು ?

ಇನ್ನಿಲ್ಲ ಇಂಥವನೆಂದು ರುದ್ರಭೂಮಿಗೆ ಹನಿಕ
ಲಾಗಲೇ ? ಸುತ್ತಲೂ ಜವುಗುಮಾಡಿ ರಾಡಿಯೆಬ್ಬಿಸಲೆ ?
ಸತ್ತರೂ ಅಮರತೆಗೆ ಬದ್ಧ ಎಂಬೊಂದು ಹುಸಿ ಸುದ್ದಿ ಹಬ್ಬಿಸಲೇ ?

ಬಾಗಿಲೇ ಇರದ ಕಿರುಮನೆಗೆ ಹಠಾತ್ತಾಗಿ
ಗೋಡೆಯೆಲ್ಲಾ ಬಿದ್ದು ಬಯಲು ಸುಗ್ಗಿ
ಎತ್ತ ಸಾಗಿದರು ಯಾವುದೂ ತಾಗದಂತಾಗಿ
ಗಾಳಿಯೋ ಬೆಳಕೊ ನೀನಾಗಿ,
ಭಾಗವಾಗದ ಮಹಾಭಾಗ ಚರಂತಿ ಜೀವವೇ, ಸಾಗು ; ಮಹಾಮನೆಗೆ ನೀಗಾಳಿ
ಯಾಗಿ ಬೆಳಕಾಗಿ ನಕ್ಷತ್ರವಾಗಿ.

ಮೇ ೧೯೭೮

# ಯುಗಾದಿಯ ಅನಿಸಿಕೆಗಳು

ಅರವತ್ತೊಂದನೆಯ ಯುಗಾದಿಗೆ ಮುಖಾಮುಖಿ ನಿಂತು
ಕಂಡದ್ದು ಕೊನೆಮುಜಲು ಸಂಜೆಗೆಂಪು,
ಅದರಾಚೆ ಮೌನದ ಅಗಾಧ ಸೂಚಕ ಮುಸುಕು,
ಮುಸುಕು ಮಬ್ಬಿನ ಹಿಂದೆ ಕೆಪ್ಪುಕಪ್ಪು.

ಮೈಲಿಮೈಲಿಗಳ ಬೆಂಗಾಡು ಬಂಜರು ಹಿಂದೆ,
ಸೊನ್ನೆಗಳ ಕೊನೆಯಿರದ ಮೊರೆತ ;
ಅಲ್ಲೊಂದು ಇಲ್ಲೊಂದು ಪೂರ್ಣಾಂಕ ಮೂಡದ ಕುದಿತ,
ಸಂಕಲನಕೇನಯ್ಯ ಮೊತ್ತ ?

ವೈಕುಂಠ ಪಟದಲ್ಲಿ ದಾಟಿ ಬಂದಂಕಣಕೆ
ಕಾಟು. ಉಳಿದದ್ದು ಯಾರ ಲೆಕ್ಕ ?
ನಾಟಕವಾಡಿದರೆ ಮಾತ್ರ ಮಾಡಬಹುದಿದರರ್ಥ,
ಸಂಕಲನ ವ್ಯವಕಲನ ಆಗ ಖಚಿತ.

ತಾನೆ ಕಲ್ಪಿಸುವ ಮಹಾಮನೆಗೆ ತಾನೆ ಬುನಾದಿ
ತಾನೆ ಇಟ್ಟಿಗೆ, ತಾನೆ ಕಂಭ ; ಶಿಲ್ಪಿ.
ಬಿಟ್ಟು ಹೋದರೆ ಬಳಿಕ ಸ್ಪಷ್ಟವಾಗುವ ಸೃಷ್ಟಿ,
ವೈಕುಂಠವಿರಬಹುದು ಇದರ ಶೈಲಿ

ಅಥವಾ ಕೈಲಾಸ ; ಅಥವಾ ಹೃದಯಸ್ಥ ಪರಮದ ಶೈಲಿ
ಒಂದು ಇನ್ನೊಂದಕ್ಕೆ ಹೊಂದಿ,
ರೂಪಸೃಷ್ಟಿಗೆ ಸದಾ ನೆಟ್ಟಿರುವ ಅಸಂತುಷ್ಟ
ಅವನೇ ಮನುಷ್ಯ ಉಳಿದದ್ದು ಹಂದಿ.

ಇಡೀ ವರ್ಷ ಮಧುರ ಪಕ್ವಾನ್ನ, ಈ ದಿನ ಮಾತ್ರ
ಬೇವು ಸೋಂಕಿದ ಬೆಲ್ಲದೊಂದು ಚಿಟಿಕೆ ;

ಬಳಿಕ ಹೋಳಿಗೆ ತುಪ್ಪ ; ಸಂಕೇತಕೋಸ್ಕರವಾಗಿ
ಸಂಕೇತವಾಗಿಯೇ ತೇಗಿದವರು.

ದೀಪವಿಲ್ಲವೆ ? ಸೂರ್ಯನೇ ಜ್ಯೋತಿ. ಹೂ ಹಣ್ಣು
ಕಾಯಿ ಇಲ್ಲವೆ, ಕೊಂಚ ಹಾಲು, ಮೊಸರು ?
ಆತಂಕ ಬೇಡ, ಮಂತ್ರಪೂತ ಚಮಚಾ ನೀರು
ಎತ್ತಿ ಚೆಲ್ಲಿರಿ ಸಾಕು, ಪೂಜಾರ್ಥಕೆ.

ಅಗ್ನಿಹೋತ್ರಕ್ಕೆ ಬದುಕಿನ ತುಂಡುತುಂಡನ್ನೆ ಬಲಿಕೊಡುವ
ಆತ್ಮಾಹುತಿಯ ರೀತಿ ನಮ್ಮ ಇರವು ;
ಇಲ್ಲದ್ದನ್ನು ಇದ್ದಂತೆ ಮಾಡಿ ನಾಟಕವಾಡಿ
ಸೂತ್ರಭಾಷ್ಯಗಳಲ್ಲಿ ಸತ್ತ ಹೂವು.

ಯುಗಯುಗಾದಿಗಳೆಷ್ಟೊ ಕಳೆದರೂ ಬೇರಿಲ್ಲ,
ಹೂ ಹಣ್ಣು ಬಿಡುವ ರೂಢಿ
ಮರೆತುಹೋಗಿದೆ. ಇದ್ದ ಹಾಗಿದ್ದು ಬಿದ್ದು ಹೋಗುವ ಪ್ರಕೃತಿ
ಬದ್ಧ. ಪುರುಷೋದಯದ ಸುದ್ದಿ

ಲಾಗಾಯ್ತಿನಿಂದಲೂ ಕೇಳುತ್ತಲಿದೆ ಇಲ್ಲಿ
ಪುರುಷವೇಷದ ಕುಣಿತ ಕಲಿತ ಮಂದಿ
ಮಂಡಿ ಸಾಧನೆ ಮಾಡಿ ಮಾಡಿ ಸವೆದರು-ಬೆಳಗಾತ
ಪೆಟ್ಟಿಗೆಯ ಕಟ್ಟಿದರು ದೊಡ್ಡಮನೆಗೆ.

ಸ್ವಂತ ಮನೆ, ಸ್ವಂತ ಮನ, ಸ್ವಂತಕ್ಕೊಂದು ನಂದನ,
ಸಿಕ್ಕಲೇ ಇಲ್ಲ. ದಕ್ಕಿದ್ದು ಬೇಗಡೆವಾಗು ;
ಗೆದ್ದು ತರುವಾಂಥಾದ್ದು ಆಚೆ ನಗೆಯುವ ಬದುಕು
ನಟನೆಗಿದ್ದದ್ದಷ್ಟೆ, ಸಾಕು ಸಾಕು.

—ಮಾರ್ಚ್ ೧೯೭೯

# ಹೇಳಬೇಕಾದದ್ದು

ಹೇಳಬೇಕಾದದ್ದು ಬಹಳ ಇದೆ. ಹೇಳಿದ್ದನ್ನೆ
ಹೇಳುವುದು, ಪುಪ್ಪುಸದ ತಿದಿಯೊತ್ತಿಯೊತ್ತಿ
ಬಿಡುವುದು ಸಹಜ, ಸುಲಭ. ಪ್ರಾಕೃತ ಗಾಳಿ ಸರ್ವದಾ
ಬೀಸುತ್ತಲೇ ಇರುತ್ತದೆ ನಿಯಮಬದ್ಧ : ಮೆಲ್ಗಾಳಿ, ತಂಗಾಳಿ,
ಬಿರುಗಾಳಿ, ಮಳೆಗಾಳಿ ; ಉರಿಗಾಳಿ ; ನೆಲ
ಮಾಳಿಗೆಯೊಳಗು ಕೂಡ ಆಡುತ್ತಲೆ ಇರುತ್ತದೆ ಪ್ರಾಣ ; ನೀರೂ ಹಾಗೆ
ಹರಿಯುತ್ತಲೇ ಇರುತ್ತದೆ ಕಟ್ಟೆ ಕಟ್ಟೆ ಕಟ್ಟುವ ತನಕ.
ಮಾತೂ ಕೂಡ ತುಣುಕು ತುಣುಕಾಗಿ ಹನಿಹನಿಯಾಗಿ ಗಜಿಬಿಜಿಯಾಗಿ
ಸ್ವರವಾಗಿ ಅಪಸ್ವರವಾಗಿ ಬೀದಿಯುದ್ದಕ್ಕು ಆಚೆಗೂ
ಬರಿಸುತ್ತಲೇ ಇರುತ್ತದೆ ಮತ್ತ, ಚಾಚುತ್ತ ಮರೆ
ಮಾಚುತ್ತಲೇ ಇರುತ್ತದೆ ನಿಜವ ; ಗುಟುಕು ಗುಟುಕಿನ ನಡುವೆ
ಬಿಚ್ಚಿಕೊಳ್ಳುವ ಬಾಲಲೀಲೆಗಳ. ಲಾಲಿ
ಹಾಡಿ ತಟ್ಟಿ ಮಲಗಿಸುವ ನಿಯತಗತಿಯ ಕವಾತುನುಡಿಯೇ ಇಲ್ಲಿ
ತೊಂಭತ್ತಾರು ಪೈಸೆ. ಎಲ್ಲಾದರೊಂದೊಂದು ಸಲ ಮಾತ್ರ
ಜ್ಯೋತಿರ್ಲಿಂಗವಾಗಿ ಭುಗಿಲೆದ್ದು ಭೇಧಿಸಿ ಸಿಗಿದು ಬಗೆದು ಬೊಬ್ಬಿರಿಯುವುದು
ನಿಯಮದಾಚೆಗೆ ನಿಗಮದೆಡೆಗೆ : ಆಕಾಶ ಗಂಗೆಗೆ ತಾಗಿ
ಹರಿಯುವುದು ಕೆಳಕ್ಕೆ ಶ್ರುತವಾಗಿ ಕೆಲವೊಂದು ಸಲ
ಶ್ರುತಿಯಾಗಿ—ಅಂತರಂಗದ ಭಿತ್ತಿಚಿತ್ರ ಮಾತುಗಳಲ್ಲಿ
ಕೆತ್ತಿ ಕೆಂಗಿಡಿಯಾಗಿ, ಕಾಲದ ಬೆನ್ನ ಹತ್ತಿ ಮಾಡಿ ಸವಾರಿ
ನಿಶ್ಚಲ ಚರಿತವಾದಾಗ ಶ್ರವಣ ಬೆಳಗೊಳದ ಗೊಮ್ಮಟನಂತೆ ಪರಿಸರವ
ನೊದ್ದು ಮೇಲೆದ್ದು ಬಾನುದ್ದಕ್ಕೂ ಧ್ವನಿಸಿದಾಗ ; ಮೌನವೇ
ಆಗಿ ಮಾತಿನ ಬುಗ್ಗೆ, ಈ ನೆಲಕ್ಕೊಗ್ಗಿ ಆಕಾಶಕ್ಕೆ
ತುಯ್ಯುತ್ತಲಿರುವಾಗ.

ಕಾಯಬೇಕು ಬೇಸಗೆಯೆಲ್ಲ, ಬೇಯಿಸುವ ಹೊತ್ತು
ಬೆವರ ವಾಸನೆ ಹೊತ್ತು ; ನಿಂತಲ್ಲಿಯೇ ಬೇರುಬಿಟ್ಟು ಬೇರ್ಪಟ್ಟು ;

ಕಾಯುತ್ತಲೇ ಕಾಯಿ ಮಾಗಿ, ಮಾಗಿದ ಕಾಯಿ
ಹಣ್ಣಾಗಿ, ಹಣ್ಣಿನ ಚಿತ್ರ ಹೊನ್ನಲ್ಲಿ ಮೂಡಿ ಪುತ್ತಳಿಯಾಗಿ, ಚಿನಿವಾರ
ಸುಟ್ಟು ಕರಗಿಸಿ ಕುಟ್ಟಿ ತಟ್ಟಿ ಮಂತ್ರಿಸಿಕೊಟ್ಟ ಕಂಠಿಕೆಯಾಗಿ.

ಹೇಳಬಹುದಾದ್ದು ಬಹಳ, ಬೇಕಾದದ್ದು
ಒಂದೆರಡು ಮಾತ್ರ ; ಬರೀ ತೆವಲು, ತವಕ ; ರತಿಶಕ್ತಿ
ಸೋಲುತ್ತಲೇ ಇರುತ್ತದೆ. ಗಂಟಲಿಗೆ ಬಂದದ್ದು
ನಾಲಗೆಗಿಳಿವುದಿಲ್ಲ. ನಾಲಗೆಯಿಂದ ಬಿದ್ದದ್ದು ಬಯಲಾಗಿ
ಗಾಳಿ ಪಾಲಾಗುವುದು. ಪುಣ್ಯ ಬಲದಿಂದ, ದೈವಕೃಪೆಯಿಂದ ಅಥವಾ
ಅಕಸ್ಮಾತ್ತಾಗಿ
ಮುತ್ತಾಗಬಹುದು ಉದುರಿದ್ದು, ಒಂದು ಹತ್ತಾಗಬಹುದು.
ಈ ನಡುವೆ ಎದೆತಿದಿ ಒತ್ತುತ್ತಲೇ ಇರುತ್ತದೆ, ಬದುಕು
ಜಳ್ಳುಗಳ ಕುಟ್ಟುತ್ತಲೇ ಇರುತ್ತದೆ, ನೀರು ನೂರಾರು ಕಡೆ
ಹರಿಯುತ್ತಲೇ ಇರುತ್ತದೆ. ಮಾತುಗಳು ನಿರಂತರವಾಗಿ
ತೊದಲುತ್ತಲೇ ಇರುತ್ತವೆ. ಮೌನದ ಮಹಾ ಮೂಸೆಯಲ್ಲಿ ಚಿನ್ನದ ನೀರು
ಯಾವಾಗ ಘನಿಸುವುದೊ ಯಾರ ಲೆಕ್ಕ ?

—ಮಾರ್ಚ್, ೧೯೮೦

# ಅರ್ಥವಾಗುವ ಹಾಗೆ ಬರೆಯಬೇಕು

ಅರ್ಥವಾಗುವ ಹಾಗೆ ಬರೆಯಬೇಕೆಂದ ಹಿರಿಯರು 'ತಮಗೆ' ಎಂದು
ಮಾತು ಸೇರಿಸಿದ್ದಕ್ಕೆ ಶಾಭಾಸೆನ್ನಲೇಬೇಕು. ಆದರೂ ಅರ್ಥ
ಇರುವ ಹಾಗೆ ಎಂದಿದ್ದರೆ ಅರ್ಥಪೂರ್ಣವಾಗುತ್ತಿತ್ತು ಮಾತು. ಸಾರ್ಥಕವಾಗಿ
ಬದುಕಿ ಬಂದವರು. ಸಾರ್ಥದ ಪಕ್ಕಕ್ಕೆ ಹತ್ತಿ ಬರುವ ಅನರ್ಥ ಅಪಾರ್ಥ
ಲೆಕ್ಕಕ್ಕೆ ಹಿಡಿಯದಿದ್ದವರು. ಹಿಂದಿನ ಸೊನ್ನೆ, ಮುಂದೆ ಬರುವ ಭೀಕರ ಸೊನ್ನೆ
ಹಿಡಿದು ರುದ್ರಾಕ್ಷಿ ಮಾಡಿ ಬರೀ ಪೂರ್ಣಾಂಕ ಗುಣಿಸುತ್ತ
ವಿಶಾಲ ರಾಜರಸ್ತೆಯ ಮೇಲೆ ಮೈಲಿ ಫರ್ಲಾಂಗು ಕಲ್ಲುಗಳ ಅಂಕ ಅಂಕಕ್ಕೆ
ಕಾಣುತ್ತ ಬಂದವರು. ಡಾಮರು ಬಳಿದ ರಸ್ತೆ, ಸಾಲುಮರ,
ಅಲ್ಲಲ್ಲಿ ಬರುವ ಅರವಟ್ಟಿಗೆ, ಅಶ್ವತ್ಥ ದೇವದಾರು ಕೃಷ್ಣಚ್ಛಾಯೆ :
ನಾಮಸಂಕೀರ್ತನದ ನೂರು ಕೊರಳಿನ ಜೊತೆಗೆ ಕೊರಳು ಸೇರಿಸಿ,
ಸೋಸಿ ಸೋಸಿ,
ಕುಡಿದವರು ಜೀವನವ. ಕಾಡಿನೊಳಹೊಕ್ಕು ಪೊದೆ ಪೊದರು ಗಿಡಗಂಟೆ
ಮುಳ್ಳುಗಳ ನಡುವೆ ಹೊಕ್ಕು ಹೊಸ ಹಾದಿ ಕಡಿವವರು, ಪದ್ಧತಿ ಬಿಟ್ಟು
ಮುದ್ದಾಮು ದಾರಿ ಹುಡುಕುತ್ತ ಅಲೆವವರು, ಬೆಟ್ಟದ ನೆತ್ತಿ
ಹತ್ತಿ ಹತ್ತೂ ಕಡೆಗೆ ಕಣ್ಣು ಕಣ್ಣು ಬಿಡುವಂಥವರು, ಇಂಥವರು
ಅರ್ಥವಾಗುವುದಾದರೂ ಹೇಗೆ ?–ಹಾಕಿಟ್ಟ ಹಳಿಗಳ ಮೇಲೆ
ರೈಲು ಬಿಟ್ಟವರಿಗೆ ? ನಿಮ್ಮ ವಿಚಾರ ಹೇಳಿದ್ದೀರಿ. ನಮ್ಮದು ನಾವು
ಆಚರಿಸಿ ತೋರಿಸುತ್ತೇವೆ ಆಕೃತಿಯಲ್ಲಿ, ನಿಮ್ಮ ರಾಜರಸ್ತೆ
ಹಿಡಿದರೆ ಮತ್ತೆ ಹೊರಟಲ್ಲಿಗೇ ಮುಟ್ಟಬೇಕು. ಆ ರಸ್ತೆ
ಸವೆದು ಸಲೀಸಾಗಿ ಈಗೀಗ ಸುತ್ತಮುತ್ತ ಸಾವಿರಾರು ಪ್ರಜಾರಸ್ತೆ
ಕವಲುಗೊಂಡಿವೆ, ನೋಡಲಿಲ್ಲ–ಅಲ್ಲವೆ ? ಹಳಸಿ ಕೊಳೆವ ಬದುಕಿಗೆ ಮತ್ತೆ
ಎಷ್ಟು ದಿನ ಲೋಭಾನ ಊದಿನ ಕಡ್ಡಿ ಹಚ್ಚುತ್ತ ಇರಬೇಕು ? ಸಹಜದ ಶುದ್ಧ
ಪ್ರಾಣ ಹರಿವ ಪಥಕ್ಕೆ ಕರೆ ಕೇಳಲಿಲ್ಲ–ಅಲ್ಲವೆ–ಹೇಳಿ.

ನಿಮ್ಮ ದಾರಿ ಸರ್ವಸಾಧಾರಣದ ರಾಜರಸ್ತೆ. ಆಗಾಗ ನಿಮ್ಮ ಮನಸ್ಸು
ದಾರಿಬಿಟ್ಟು ಪಕ್ಕದಶ್ವತ್ಥ ಮರದ ಬಳಿ, ಕೊಳದಲ್ಲಿ ಅರಳಿರುವ

ತಾವರೆಯ ಬಳಿ, ಹೊಲಗದ್ದೆ ಮಾಡುತ್ತಿರುವ ಒಕ್ಕಲಿನ ಹಳ್ಳಿಯ ಬಳಿ
ತೊಂಡಲೆದು ಬರುತ್ತಿತ್ತು ಅಷ್ಟೆ. ಕತ್ತಲೆಂದರೆ ನಿಮಗೆ ಭಯ,
ಅದರ ಆಳಕ್ಕಿಳಿದು ಏಕಾಂಗಿಯಾಗಿ ನೆಳಲುಗಳ ಜೊತೆ
ಜೋತಾಡುತ್ತಿರುವಸಂಖ್ಯ ಶಂಕೆ, ಸಂದಿಗ್ಧ, ಸಮ್ಮೋಹ ಭೂತಗಳ ಕಡೆ
ತಿರುಗಿಯೂ ನೋಡಲಾರಿರಿ. ಸೂರ್ಯ ಚಂದ್ರ ಅಥವಾ ಗ್ಯಾಸ್‌ಲೈಟ್, ವಿದ್ಯುದ್ದೀಪ
ಸ್ಪಷ್ಟ ಬೆಳಕಲ್ಲಿ ನರ್ತಿಸ ಬಯಸುವವರು. ಲಾಲಿತ್ಯದತ್ತ ಕಡೆಗೇ ನಿಮ್ಮ
ತುಯಿತ. ತಾಂಡವಕ್ಕಂಜಿ ಅದಕ್ಕರ್ಥವೇ ಇಲ್ಲೆಂದು ರಾಮ ರಾಮಾ ಎಂದು
ಆರಾಮಾಗಿ ಇದ್ದವರು. ಹೇಳುತ್ತೀರಿ, ಅರ್ಥವಾಗುವ ಹಾಗೆ ಬರೆಯಿರಿ ಎಂದು.
ಚೆನ್ನಾಗಿತ್ತು ಸಮಗ್ರಾರ್ಥಪೂರ್ಣವಾಗಿ ಎಂದಿದ್ದರೆ. ಹಾವು ಬಿಚ್ಚಿದ ಪೊರೆ,
ಅವಾಚ್ಯದ ಕರೆ, ಅನಿರ್ವಚನೀಯದ ಕರಕರೆ, ಕಾಣದ್ದರ ಕರೆ
ಇವು ನಿಮಗೆ ಅರ್ಥವಾಗದ ಗೋಜು-ನೆಲ ಕೆರೆದು ಹಣ್ಣು ಬೆಳೆಕೊಂಬವರು,
ನೆಲದೊಳಗೆ ಪಾತಾಳದಲ್ಲಿ ಬತ್ತಲೆ ಕುಣಿವ ನಾಗಕನ್ಯೆಯರ ನವೀನ
ಪುರಾಣವೃತ್ತ, ಕಂಡರೂ ನಿಮಗೆ ಕಾಣುವುದಿಲ್ಲ.

ಅರಪಾವು ಗಟ್ಟಿಮೊಸರಿಗೆ ಬರಾಬ್ಬರಿ ಒಂದು ಕೊಡ ನೀರು,
ಅಲ್ಲಲ್ಲಿ ತೇಲುವೊಂದೆರಡು ಗರಣೆ ಬಿಟ್ಟರೆ ಎಲ್ಲವೂ ಪವಿತ್ರ
ತೀರ್ಥವೇ. ಮೊಸರ ಹೆಸರಲ್ಲಿ ನೀರೆರೆವ ಗದ್ಯದ ಕೆಲಸ
ಸುಗಮ, ಹಿತಕಾರಿ, ಜೀರ್ಣಕ್ಕೆ ತೊಂದರೆ ಇಲ್ಲ ; ತಲೆಗೂ ತಂಪು.
ಮಕ್ಕಳಿಗೆ ಪಾಠ ಹೇಳುತ್ತ ಬಂದಿದ್ದೀರಿ. ಮತ್ತೆ ಮತ್ತೆ
ಕಣ್ಣೊರಸಿಕೊಳ್ಳುತ್ತ, ತಲೆದೂಗುತ್ತ ನಡೆದ ಚರ್ವಿತ ಚರ್ವಣವ ಕೇಳಿ
ಕಿವುಡುಗೊಂಡಿದ್ದಾರೆ ಜನ. ಮನಸ್ಸಿಗೆ ಚುಚ್ಚಿ
ಬುದ್ಧಿಯನ್ನುದ್ಬುದ್ಧಗೊಳಿಸಿ ಬಿರುಗಾಳಿ ಸಿಡಿಲು, ಮಳೆ ಧಾರೆಧಾರೆಯು ಹಾಗೆ
ಸುರಿದು ಒಳನೆಲಕ್ಕೆ ತಂಪೆರೆದು, ಹೊಸಬೆಳೆ ತರುವ ಕರಾಮತ್ತು
ಅರ್ಥವಾಗುವುದಿಲ್ಲ.

ಇಲ್ಲ ಅರ್ಥವಾಗುವುದಿಲ್ಲ. ಮುದುಕ, ರೋಗಿ, ಮೃತ ಈ ಮೂವರ ವಿಚಿತ್ರ
ಚಿತ್ರ ಅರ್ಥವಾದದ್ದು ಬುದ್ಧನಿಗೆ. ಸೂರ್ಯೋದಯ, ಸೂರ್ಯಾಸ್ತ,

ತಂಗಾಳಿ ತೆವಳಿ ಸಾಗುವ ಕೊಳ, ಬೀದಿ ಬದಿಯಲ್ಲಿ
ನಿಂತು ಬೇಡುವ ಶತಕ್ಷತ ಕುಂಟ ; ಲಕ್ಷ ಲಕ್ಷ ಕಣ್ಣುಗಳಿಂದ
ಕತ್ತಲನ್ನೇ ಬಗೆವ ನಕ್ಷತ್ರ ; ತೆರೆತೆರೆಯು.ತೆರೆತೆರೆದು
ನೆಲ ಮೃದಂಗವ ಮಾಡಿ ಧೀಂಕಿಡುವ ತೆಂಕಣ ಗಾಳಿ–ಈ ಎಲ್ಲಕ್ಕು
ಅರ್ಥ ಏನಿದೆ ಹೇಳಿ–ಕಾಣದೊಂದು ಕೈ
ಕಿತ್ತು ಬಿಸುಡದೆ ತೊಟ್ಟು ಬಟ್ಟೆಗಳ, ಒಳ ಕಟ್ಟುಗಳು
ಬಿಚ್ಚಿಕೊಳ್ಳದೆ, ನಿಟ್ಟು ನಿಟ್ಟಿನಲ್ಲೂ ಬೆಂಕಿ ಹೊತ್ತಿಕೊಳ್ಳದೆ–
ಅರ್ಥವೇ ಇಲ್ಲ–ಅಥವಾ ಎಲ್ಲವೂ ಅರ್ಥ

—ಸೆಪ್ಟಂಬರ್ ೧೯೭೫

# ನೆಲ ಸಪಾಟಿಲ್ಲ

ನೆಲ ಸಪಾಟಲ್ಲ : ಹೊಳೆ, ಕೆರೆ, ಬಾವಿ, ಹಳ್ಳ, ಕೊಳ್ಳ,
ಗೊಬ್ಬರ ಗುಂಡಿ–ಹೀಗೆ
ತಗ್ಗುಗಳು ಏರುಗಳು, ಮುಗ್ಗರಿಸುವುದು ಸಹಜ.
ತಗ್ಗುಗಳಲ್ಲಿ ನೀರು ತುಂಬುತ್ತದೆ. ಸಕಲ ಕುಂಡೀ ತೀರ್ಥ
ಯಾರಿಗೂ ಬೇಡ. ಹರಿವ ನೀರೆಂಥದೇ ಇರಲಿ ಯಾವುದೇ
ಆಭ್ಯಂತರಗಳಿಲ್ಲ.
ಬಾವಿಯ ನೀರ ಕುಡಿಯಲಾಗುತ್ತದೆ, ಕೆಸರು ತುಂಬಿದ್ದರೂ, ಪಾಚಿ
ಮುಚ್ಚಿದ್ದರೂ ಕೂಡ.
ಆದರೆ ಎಷ್ಟೊಂದು ಭವ್ಯವಿದ್ದರೂ ಕೂಡ ಕಡಲ ನೀರ ಕುಡಿಯಲಾಗುವುದಿಲ್ಲ.
ನೀರಿನ ಮೇಲೆ ಜಗದಾತ್ಮ ಸೂರ್ಯನ ಲಕ್ಷ ಲಕ್ಷ ಕೈ ಆಡತೊಡಗಿದರೆ
ಜುಮ್ಮು, ಕಂಪನ, ರೂಪಚ್ಛೇದ, ರೂಪಾಂತರ ;
ಆವಿಯಾದಾಗಲೇ ನೀರು
ಶುದ್ಧ ಸ್ವರೂಪ, ಆಕಾಶ ಪ್ರತಾಪ, ವಿದ್ಯುದ್ದೀಪ, ಧಾರಾಕಾರ ಸೇಕ.
ಆಕಾಶ ಸೇರಿದರೆ ಅಲ್ಲಿ ಹೊಂಡದ ನೀರು, ತೀರ್ಥ, ಬಾವಿಯ ನೀರು
ಕಡಲುಪ್ಪು ನೀರು. ಚರಂಡಿಯಲ್ಲಿ ಕೊಳೆಯುವ ನೀರು
ಎಲ್ಲ ಒಂದಾಗುವುದು ;
ಜಾತಿ ಎಲ್ಲಿದೆ ಹೇಳು ? ಇಲ್ಲಿ ಮಣ್ಣಲ್ಲಿ ನೆಟ್ಟಾಗ.

—೧೯೭೭

# ಟಿಪ್ಪಣಿಗಳು

ಭೂಮಿಗೀತ.

ಸಾಲು ೧೨ ಹಾಡಿ : ಮನೆಯ ಹತ್ತಿರ ದಟ್ಟವಾಗಿ ಬೆಳೆಯ ಬಿಟ್ಟಿರುವ ಕಾಡು ಗಿಡ ಮರಗಳ ಗುಂಪು; Coppice, Underwood.

,, ೧೪ ತೋಟಗೋರಟೆ : ತೋಟದ ಗೋರಟೆ, ಗೋರಟೆ : ಸ್ಫಟಿಕದ ಹೂವು.

,, ,, ಬಲ್ಬು : bulb.

,, ೧೬ ಕುಂಗ : ಮುತ್ತಿಗಾಗಿ ನೀರಿನಾಳಕ್ಕೆ ಮುಳುಗುವವನು; pearl-diver.

,, ೧೯ ಬುಂಡೆ : ಹೆಂಡದ ಪಾತ್ರೆ.

,, ೨೫ ಅಪರಪ್ರಯೋಗ : ಮರಣೋತ್ತರ ಕ್ರಿಯೆ.

,, ೩೫ ಅಳಿವೆ : ನದಿ ಸಮುದ್ರವನ್ನು ಸೇರುವ ಸ್ಥಳ.

,, ೪೪ ಪ್ರೇಮ ಧೃತರಾಷ್ಟ್ರನಪ್ಪಿಗೆ ಭಗ್ನ ಬಲಭೀಮ : ಪ್ರೇಮ ಎಂಬ ಧೃತರಾಷ್ಟ್ರನ ಆಲಿಂಗನಕ್ಕೆ ಬಲಭೀಮ ಪುಡಿಪುಡಿಯಾಗುತ್ತಾನೆ; ತನ್ನ ಮಗ ಧುರ್ಯೋಧನನ ಸಾವಿನಿಂದ ಕೋಪೋದ್ರಿಕ್ತನಾದ ಧೃತರಾಷ್ಟ್ರನಿಗೆ ಭೀಮ ನಮಸ್ಕರಿಸಲು ಹೋದಾಗ ಅವನು ಭೀಮನನ್ನು ಆಲಿಂಗಿಸಲು ಬರುತ್ತಾನೆ. ಅವನ ಉದ್ದೇಶವನ್ನರಿತಿದ್ದ ಶ್ರೀ ಕೃಷ್ಣ ಧೃತರಾಷ್ಟ್ರನಿದಿರು ಉಕ್ಕಿನಲ್ಲಿ ಮಾಡಿದ್ದ ಭೀಮನ ಆಕೃತಿಯನ್ನು ನಿಲ್ಲಿಸುತ್ತಾನೆ. ಧೃತರಾಷ್ಟ್ರ ಅದನ್ನು ತಬ್ಬಿಕೊಂಡಾಗ ಅದು ಪುಡಿಪುಡಿಯಾಗುತ್ತದೆ.

,, ೪೫ ರೈಲುಬಿಟ್ಟೆ : (೧) ರೈಲಿನಲ್ಲಿ ಕುಳಿತು ನಡೆದೆ.
(೨) ಬಡಾಯಿ ಕೊಚ್ಚಿದೆ; ವ್ಯರ್ಥಾಲಾಪದಲ್ಲಿ ಮಗ್ನನಾದೆ.

,, ೪೬ ಕೊನೆಯ ಬಟ್ಟೆ ; ಕೊನೆಯ ದಾರಿ.

,, ೪೭ ಈಡಿಪಸ್ : ಗ್ರೀಸ್ ದೇಶದ ಥೀಬ್ಸ್ ನಗರರಾಜ್ಯದ ದೊರೆ ; ಅಜ್ಞಾನ ವಶದಿಂದ ತನ್ನ ಕುಲಗೋತ್ರಗಳನ್ನರಿಯದ ಈಡಿ

ಪಸ್ ತನ್ನ ತಂದೆಯನ್ನು ಕೊಂದು ತನ್ನ ತಾಯಿಯನ್ನೇ ಮದುವೆಯಾಗಿ ಆ ಮೇಲೆ ನಿಜಸ್ಥಿತಿ ತಿಳಿದು ಪಶ್ಚಾತ್ತಾಪದಿಂದ ಕಣ್ಣು ಕಿತ್ತುಕೊಂಡು ಯಾತನೆಪಡುತ್ತಾನೆ.

,, ೫೩ ಕರ್ಣಪಿಶಾಚಿ : ಮಂತ್ರವಾದಿಯ ಆಜ್ಞೆಯಂತೆ ಕಿವಿ ಹತ್ತಿರ ಬಂದು ಪಿಸುಗುಟ್ಟಿ ಬೇಕಾದ್ದನ್ನು ತಿಳಿಸುವ ಒಂದು ದೆವ್ವ ಅಥವಾ ಪಿಶಾಚಿ.

,, ೬೦ ಷಾಃಪಸಂದ್ : ಮೈಸೂರಿನ ಟಾಂಗಾ.

,, ೬೩ 'ಮೈಯೆ ಭಾರ ಮನವೆ ಭಾರ' ಪು.ತಿ.ನ. ಅವರ 'ಅಹಲ್ಯೆ' ಯ ಉತ್ತರಾಂಕದ ನಾಲ್ಕನೆಯ ದೃಶ್ಯದಲ್ಲಿ ಅಹಲ್ಯೆಯ ಮಾತು.

,, ೭೦ ಗರಟೆ : ಕರಟ, ಚಿಪ್ಪು.

,, ೭೧ ಬಿದಿರು ಮೇಣೆ : ಬಿದಿರಿನ ಪಲ್ಲಕಿ ; ಚಟ್ಟ.

,, ೮೩ ಸ್ವರತಿ : ಸ್ವಲಿಂಗ ಸಂಬಂಧ ; autosexuality.

,, ೮೭ ವಿಷಮರತಿ : ವಿರುದ್ಧ ಲಿಂಗಸಂಬಂಧ : heterosexuality

,, ೯೨ ಆರುಮಂದಿ ಸಖರು : ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಷಡ್ವೈರಿಗಳು.

,, ೯೬ ಉತ್ತಾನಪಾದ : ಉತ್ತಾನಪಾದ ರಾಯನಿಗೆ ಸುನೀತಿ ಹಿರಿ ಹೆಂಡತಿ, ಸುರುಚಿ ಕಿರಿ ಹೆಂಡತಿ. ಸುನೀತಿಯ ಮಗ ಧ್ರುವ, ಸುರುಚಿಯ ಮಗ ಉತ್ತಮ. ಉತ್ತಾನಪಾದರಾಯ ಕಿರಿ ಹೆಂಡತಿಯ ಮೇಲಿನ ಮೋಹದಿಂದ ಸುನೀತಿಯನ್ನೂ ಧ್ರುವನನ್ನೂ ಕಡೆಗಣಿಸುತ್ತಾನೆ. ಇದು ಬಾಲಕ ಧ್ರುವನ ವೈರಾಗ್ಯಕ್ಕೆ ಕಾರಣವಾಗುತ್ತದೆ.

,, ೯೮ ಆರಣ್ಯಕರು : ಅರಣ್ಯದಲ್ಲಿ ವಾಸಮಾಡುವವರು ; ಆರಣ್ಯಕ ಎಂಬ ವೇದದ ವಿಭಾಗಕ್ಕೆ ಕಾರಣರಾದ ಋಷಿಗಳು.

,, ,, ಬಟ್ಟೆ : (೧) ವಸ್ತ್ರ, (೨) ದಾರಿ.

ಹಳೆಮನೆಯ ಮಂದಿ

ಸಾಲು ೨ ಕುಡುಬಿ : ಕುಡಿಯ, ಗುಡ್ಡಗಾಡುಗಳಲ್ಲಿ ವಾಸಿಸುವ ಮೂಲ ನಿವಾಸಿ.

,, ೫ ಕಾಲಾವಧಿ : (೧) ತಾತ್ಕಾಲಿಕ,

(೨) ಮನೆ ಕಟ್ಟುವಾಗ ಬಿದಿರುಗಣೆಗಳಿಂದ ಮಾಡಿ ಕೊಳ್ಳುವ ಒಂದು ಸಾಧನ.

,, ,, ಕಂತ್ರಾಟು : (೧) Contract.

(೨) ಹಂಚಿಕೆ, ಯುಕ್ತಿ.

,, ೧೦ ಪಾಗಾರ : ಪ್ರಾಕಾರ ; An encircling wall, fence, enclosure.

,, ೨೭ ಕೂಚು : ಸೈನ್ಯದ ನಡೆ, military march

,, ೩೯ ಅಡೆಗಿಟ್ಟು : ಅಡೆಗೆ ಹಾಕಿ. ಉಬ್ಬೆಗೆ ಹಾಕಿ.

,, ೪೨ ಈಜಿಪ್ತುಮಮ್ಮಿ : ಈಜಿಪ್ತ ದೇಶದ ಪಿರಾಮಿಡ್ಡುಗಳಲ್ಲಿ ರಾಸಾಯನಿಕ ತೈಲದ ಪ್ರಭಾವದಿಂದ ಸುರುಟಿದರೂ ಕೊಳೆಯದ ಹೆಣ.

,, ೪೩ ಗನಾದು : ಘನವಾದ. ಚೆನ್ನಾಗಿರುವ, ಒಳ್ಳೆಯ.

,, ೪೭ ಮಿಡಿ : ತೀರ ಎಳೆಮಾವಿನಕಾಯಿ.

,, ,, ಸೊನೆ : ಮಿಡಿಯ ತೊಟ್ಟು ಮುರಿದಾಗ ಹೊರಬರುವ, ಸುಡುವ ರಸ.

,, ೪೯ ಯಾತ : ಏತ.

,, ೫೦ ಯಾತಾಯಾತ : ಯಾತ—ಆಯಾತ : ಹೋಗುವುದು ಬರುವುದು.

ಹದ್ದು.

ಸಾಲು ೧೫ ಹಾಯಿ : ಪಟ, Saixl.

,, ೫೮ ಬೆರಿಯಾ : ಸ್ಟಾಲಿನ್ನನ ಬಲಗೈ ಆಗಿದ್ದ ಸೋವಿಯಟ್

ಪೋಲೀಸ್ ದಳದ ಮುಖ್ಯಾಧಿಕಾರಿ. ಸ್ಟಾಲಿನ್ನನ ಮರಣಾನಂತರ ಪದಚ್ಯುತನಾಗಿ ಮರಣದಂಡನೆಗೆ ಗುರಿಯಾದ. ರಷ್ಯಾದೇಶದ ವಿಶ್ವಕೋಶದಲ್ಲಿ ಬೆರಿಯಾ ವಿಚಾರವಾಗಿ ಇದ್ದ ಲೇಖನ ಆದರ ಮುಂದಿನ ಆವೃತ್ತಿಯಲ್ಲಿ ಮಾಯವಾಯಿತು.

,, ೪೫ ಬೆಹರಿಂಗು ಜಲಸಂಧಿ : Behring Strait : ರಷ್ಯಾ ವಿಶ್ವಕೋಶದಲ್ಲಿ ಈ ಜಲಸಂಧಿಯ ಬಗ್ಗೆ ಇದ್ದ ಲೇಖನ ಮೊದಲೂ ಇತ್ತು, ಈಗಲೂ ಇದೆ.

,, ,, ಗೆಲ್ಲ : ಗೆಲುವು, ವಿಜಯ.

,, ೬೫ ಕ್ರೌಂಚವಧದುದ್ವೇಗದಳಲು : ಕ್ರೌಂಚ ಪಕ್ಷಿಗಳ ಜೋಡಿಯಲ್ಲಿ ಗಂಡನ್ನು ಕೊಂದಿಕ್ಕಿದ ಬೇಡನ ಬಗ್ಗೆ ವಾಲ್ಮೀಕಿಗುಂಟಾದ ಕೋಪ ಮತ್ತು ದುಃಖ.

,, ೭೧ ಬಿಸಿಲಿಗೀಸುಗುಂಬಳ : ಬಿಸಿಲಿಗೆ + ಈಸುಕುಂಬಳ.

,, ೭೬ ಗೆಲ್ಲು : ಸಣ್ಣ ಕೊಂಬೆ.

,, ೭೮ ಹದ್ದು : (೧) ಗೃಧ್ರ, (೨) ಗಡಿ, ಮೇರೆ.

ಪ್ರಾರ್ಥನೆ.

ಸಾಲು ೧೫ ಕಪಿಲೆ : (೧) ನೀರು ಎತ್ತುವ ಸಾಧನ.
(೨) ಕಪಿಲ ವರ್ಣದ ಹಸು.

,, ೧೭ ಫಸಲು : ಬೆಳೆ, harvest.

,, ೩೩ ಸ್ವಪ್ನೇಂದ್ರಿಯ : ಸ್ವಪ್ನಸ್ಖಲನ.

,, ೪೯ ಫರಂಗಿರೋಗ : (೧) ಲೈಂಗಿಕರೋಗ,
(೨) ಪಾಶ್ಚಾತ್ಯ ಪ್ರಭಾವದ ರೋಗ.

,, ೫೦ ಶಿಖೆ : (೧) ಜ್ವಾಲೆ, ಬೆಳಕಿನ ಕಿರಣ ;
(೨) ಜುಟ್ಟು.

,, ೭೮ ಅರೆಹೊರೆದ ; ಅರ್ಧ ಬೆಳೆದ.

,, ೬೯ ವಿನತಾ ಪುತ್ರ ; (೧) ತೊಡೆ ಹೊರೆಯದ ಅರುಣ,

(೨) ಪರಿಪೂರ್ಣಾವತಾರಿ, ಗರುಡ.
,, ೭೦ ಮಂತು : ಕಡೆಗೋಲು.

ಭೂತ.

ಸಾಲು ೪ ಆಳ್ಳಳ್ಳಾಯಿಜಪಿಸುವ : ಮಗುವನ್ನು ಮಲಗಿಸಲು ಆಳ್ಳಳ್ಳಾಯಿ ಎಂದು ಮತ್ತೆ ಮತ್ತೆ ಹೇಳುವ.
,, ೧೬ ಕಂಕಾಲ : ಅಸ್ಥಿಪಂಜರ.
,, ೧೭ ತಿರುಗುಮುರುಗುಪಾದದ ಪರಿಷೆ : ಭೂತಗಳ ಗುಂಪು
,, ೨೭ ಪಶ್ಚಿಮ ಬುದ್ಧಿ : (೧) ಪಶ್ಚಾತ್ತಾಪಪಡುವ ಬುದ್ಧಿ.
(೨) ಪಾಶ್ಚಾತ್ಯಕ್ಕೆ ಸೋತ ಬುದ್ಧಿ.
,, ೨೮ ಪೂರ್ವಮೀಮಾಂಸೆ : (೧) ಹಿಂದೆ ನಡೆದದ್ದರ ವಿಚಾರ ವಿಮರ್ಶೆ.
(೨) ವೇದೋಕ್ತವಾದ ಯಜ್ಞಯಾಗಾದಿಗಳ ವಿಚಾರ.
,, ೨೮ ಕರ್ಮಕಾಂಡ : ಯಜ್ಞಯಾಗಾದಿ ಕರ್ಮಗಳನ್ನು ಹೇಳುವ ವೇದ ವಿಭಾಗ
,, ೨೮ ಬಗೆಯಬೇಕು : (೧) ಕುರಿತು ಯೋಚಿಸಬೇಕು.
(೨) ಅಗೆಯಬೇಕು.
,, ೩೭ ಕಾರಣ ಬೀದಿ : ಕಾರಣ ಶರೀರ ಸುತ್ತುವ ದಾರಿ.

ಸ್ವಾತಂತ್ರ್ಯ : ೧೯೪೮ ರ ಪಾತ.

ಪಾಠ : (೧) ಕಲಿಯಬೇಕಾದ್ದು : ನೀತಿ.
(೨) ಪಾಠಾಂತರ : version.
ಸಾಲು ೧ ಸಾಕು ಮಕ್ಕಳೆ ಸಾಕು : ಇಲ್ಲಿ ಸಾಕು ಎಂಬ ಶಬ್ದದ ಎರಡು ಅರ್ಥಗಳನ್ನು ಗಮನಿಸಬೇಕು :
ಸಾಕು ಮಕ್ಕಳು : (೧) ಸಾಕಿದ ಮಕ್ಕಳು.
(೨) ಮಕ್ಕಳು ಸಾಕು.

,, ,, ತಂದೆ : (೧) ಜನಕ.
(೨) ತರುತ್ತೇನೆ ಎನ್ನುವುದರ ಭೂತಕಾಲ.

,, ೨೦ ಪಂಚಾಯತನ ಪೀಠ : ಆದಿತ್ಯ, ಅಂಬಿಕೆ, ವಿಷ್ಣು, ಗಣೇಶ ಮತ್ತು ಶಿವ-ಈ ಐದು ದೇವರುಗಳನ್ನು ಪೂಜಿಸುವ ಪೀಠ.

,, ೩೫ ಆಭೋಗ : ವಿಸ್ತಾರ.

,, ೪೮-೪೯ ಒಂದು ತಿನ್ನುವುದು ಸವಿಹಣ್ಣ....ತಿನ್ನದಿನ್ನೊಂದು ಸುತ್ತ :

"ದ್ವಾ ಸುಪರ್ಣಾ ಸಯುಜಾ ಸಖಾಯಾ
ಸಮಾನಂ ವೃಕ್ಷಂ ಪರಿಷಸ್ವಜಾತೇ !
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ
ಅನಶ್ನನ್ನನ್ಯೋಽಭಿಚಾಕಶೀತಿ ॥

(ತೃತೀಯ ಮುಂಡಕ, ಪ್ರಥಮ ಖಂಡ.)

,, ೫೬ ಹನೆಮರ : ತಾಳೆ ಮರ.

,, ೬೨ ಸಾಲಭಂಜಿಕೆ : ಪುತ್ಥಳಿ, ಗೊಂಬೆ.

,, ೬೩ ಬಳುಮಾಡು : ಛಾವಣಿಯ ಅಂಚಿನ ಕೆಳಗೆ ಮನೆಯ ಮುಂಭಾಗದಲ್ಲಿ ಮಳೆಗಾಲದಲ್ಲಿ ಕಟ್ಟುವ ಸಣ್ಣ ಕೆಳಛಾವಣಿ ಮತ್ತು ಅದರ ಕೆಳಗೆ ಅಂಗಳಕ್ಕಿಂತ ಕೊಂಚ ಎತ್ತರವಾಗಿ ಮಳೆಯಿಂದ ಸುರಕ್ಷಿತವಾಗಿರುವ ಜಾಗ.

,, ೭೧ ಬೆಳತಿಗೆ : ಬೆಳತಿಗೆ ಅಕ್ಕಿ, ಬಿಳಿ ಅಕ್ಕಿ ; raw rice

,, ೭೯ ತಂಭಾಲು : ತಂಪು+ಹಾಲು ; ಈಗ ತಾನೇ ಕರೆದ ಕಾಯಿಸದ ಹಾಲು

ನೆಹರೂ ನಿವೃತ್ತರಾಗುವುದಿಲ್ಲ.

ಸಾಲು ೮ ಅಲಕಾವತಿ : ಕುಬೇರನ ರಾಜಧಾನಿ

,, ೧೧ ಧಮಾಸು : ಬೀದಿಯ ಕಲ್ಲುಗಳನ್ನು ಕುಟ್ಟಿ ಸಮಗೊಳಿಸುವ ಸಲಕರಣೆ.

,, ೧೨ ತುಹಿನಾಚಲ : ಹಿಮಾಲಯ.

,, ೧೬ ತೃತೀಯ ಕ್ರಮ : (೧) ಮೂರನೆಯ ದಾರಿ, ರೀತಿ.
(೨) ಮೂರನೆಯ ಹೆಜ್ಜೆ.

,, ೧೮ ನೆಗಸು : ಪ್ರವಾಹ.

,, ೨೨ ಉದ್ಬಾಹು : ಬಾಹುಗಳನ್ನು ಮೇಲಕ್ಕೆತ್ತಿದವನು:
"ಪ್ರಾಂಶುಲಭ್ಯೇ ಫಲೇ ಲೋಭಾದುದ್ಬಾಹುರಿವ ವಾಮನಃ"
(ರಘುವಂಶ, ಪ್ರಥಮಸರ್ಗ, ತೃತೀಯ ಶ್ಲೋಕ.)

,, ೨೬ ರಂಗ : (೧) ರಂಗಸ್ಥಳವನ್ನು
(೨) ಬಣ್ಣವನ್ನು.

# ತಪ್ಪೋಲೆ

| ಪುಟ ಸಂಖ್ಯೆ | ಸಾಲು | ತಪ್ಪು | ಒಪ್ಪು |
|---|---|---|---|
| ೫ | ೫ | ಬಾಳುವೆಯೆ | ಬಾಳುವೆಯು |
| ೧೧ | ೧೭ | ವಿಚಿ | ವೀಚಿ |
| ೧೩ | ೨೦ | ನೆಲಿವರಿಲ್ಲ | ನಲಿವರಿಲ್ಲ |
| ೧೭ | ೧೬ | ಮೆಲೆಲರ್ಗೆ | ಮೆಲ್ಲೆಲರ್ಗೆ |
| ೧೯ | ೭ | ಮೆದುಪ್ರ | ಮೆಲುಪು |
| ೨೨ | ೨೪ | ಮೆಲೆಲರು | ಮೆಲ್ಲೆಲರು |
| ೩೯ | ಶೀರ್ಷಿಕೆ | ಏನಿರಬಹದು ? | ಏನಿರಬಹುದು ? |
| ೪೨ | ೮ | ಸೂಲುಗಳ | ಸೋಲುಗಳ |
| ೪೩ | ೫೦ | ಬೀಡೊಂದೆನು | ಬೀಡೊಂದನು |
| ೪೪ | ೧೧ | ಕೊಳಯೆ | ಕೊಳೆಯ |
| ೪೪ | ೧೮ | ಚಿರಾ ಉದಾರ | ಚಿರ ಉದಾರ |
| ೪೮ | ೪೮ | ಓಲವ | ಒಲವ |
| ೫೩ | ೧೧ | ತೆವಳುವವು | ತೆವಳುವೆವು |
| ೫೩ | ೧೪ | ಅಳಿಯ ಬಲವು | ಅಳಿಯೆ ಬಲವು |
| ೫೪ | ೨೬ | ನೀರಡಿಸಿದವಗುಪು | ನೀರಡಿಸಿದವಗುಪ್ಪು |
| ೫೮ | ೧೪ | ಹೊಗೆಯ | ಹೊಗೆಯು |
| ೫೮ | ೧೯ | ಝ | ಝು |
| ೫೮ | ೨೦ | ೪೧ | ೨೦ |
| ೭೦ | ೪೭ | ಜನನವೆತ್ತಿದಂಥ | ಜನರನೆತ್ತಿದಂಥ |
| ೭೦ | ೬೬ | ನಿಂದರೂ | ನಿಂದರು |
| ೭೧ | ೯೧ | ನೆಂಬಲೆಂತು | ನಂಬಲೆಂತು |
| ೭೨ | ೧೨೩ | ಅಲೆವುಮ್ತು | ಅಲೆವುದ್ತು |

| ಪುಟ ಸಂಖ್ಯೆ | ಸಾಲು | ತಪ್ಪು | ಒಪ್ಪು |
|---|---|---|---|
| ೭೩ | ೧೨೪ | ತೆರೆತರೆಯೂ | ತೆರೆತೆರೆಯೂ |
| ೭೩ | ೧೪೨ | ಬೆಳಕಿದು | ಬೆಳಗದು. |
| ೭೩ | ೧೪೪ | ಎಲ್ಲ ಜನರು | ಎಲ್ಲ ಜನಕು |
| ೭೫ | ೧೪ | ಮಂಥ | ಮಂದ |
| ೭೭ | ೨೦ | ಸೊಂವು | ಸೊಂಪು |
| ೭೯ | ೪೭ | ಬಾನತುಟಿಯ | ಬಾನ ತುಟಿಯು |
| | | ಬುವಿಯ ತುಟಿಯು | ಬುವಿಯ ತುಟಿಯ |
| ೮೪ | ೧೮೩ | ಮೈಗೆರೆಯಿಪು | ಮೈಗರೆಯಿತು. |
| ೮೫ | ೨೦೧ | ಭೂದೇವಿಯ | ಭೂದೇವಿಯೆ. |
| ೧೦೩ | ೩೩ | ಇಂಥ ಈ ತಂಪು | ಇಂಥ ಈ ಕಂಪು |
| ೧೧೦ | ೨೨ | ಮುಂಗಿಲಿಂದ | ಮುಗಿಲಿಂದ |
| ೧೧೪ | ೨೪ | ಬೊಬ್ಬಿರುದು | ಬೊಬ್ಬಿರಿವುದು |
| ೧೧೬ | ೨೮ | ಗುಂಡೊದರಗೆ | ಗುಂಡೋದರಗೆ |
| ೧೧೮ | ೨೩ | ಇಳುವ ಕೋಗಿಲೆ ಬಡಿ | ಇರುವ ಕೋಗಿಲೆಯ ಬಡಿ |
| ೧೨೨ | ೯೧ | ಹಿಮಗಿರಯ | ಹಿಮಗಿರಿಯ |
| ೧೨೩ | ೧೦೦ | ಮಂದಾರಗೀತ ದುರುಳ್ಳ | ಮಂದಾರಗೀತ ದುರುಳು |
| ೧೨೩ | ೧೦೨ | ಹಳ್ಳಕೊಳ್ಳು | ಹಳ್ಳ ಕೊಳ್ಳ |
| ೧೨೩ | ೧೧೦ | ಸ್ವಿಚ್ಚು : | ಸ್ವಿಚ್ಚು, ಸ್ವಿಚ್ಚು : |
| ೧೨೩ | ೧೧೫ | ಕೀ ಕೊಟ್ಟು, ದಿವಕೆಷ್ಟು, | ಕೀಕೊಟ್ಟು ದಿವಕೆಷ್ಟು |
| ೧೨೩ | ೧೧೭ | ಕಕ್ಕುತಿದೆ | ಕಾಕ್ಕುತಿದೆ |
| ೧೨೩ | ೧೧೭ | ಕರಳನ್ನು | ಕರುಳನ್ನು |
| ೧೨೪ | ೧೨೮ | ಹಬ್ಸವೊಲು | ಹಬ್ಬುವೊಲು |
| ೧೨೪ | ೧೨೯ | ದಿತು | ದಿತ್ತು |
| ೧೨೪ | ೧೪೦ | ಹೊಟ್ಟೆಯೊಳಗಿಂದಿಷ್ಟು | ಹೊಟ್ಟೆಯೊಳ ಗೊಂದಿಷ್ಟು |

| ಪುಟ ಸಂಖ್ಯೆ | ಸಾಲು | ತಪ್ಪು | ಒಪ್ಪು |
|---|---|---|---|
| ೧೨೫ | ೧೫೬ | ಮುಲಕಿತ್ತು | ಮುಲುಕಿತ್ತು |
| ೧೨೫ | ೧೬೭ | ಮಾಕ್ಕೋವೆ ? | ಮಾಸ್ಕೋವೆ ? |
| ೧೨೬ | ೧೮೬ | ಅಡೇನ್ | ಆಡೆನ್ |
| ೧೨೬ | ೧೮೭ | ಟ್ರೊರೋಮಾನ್ಸ್ಸ್ | ಟ್ರೊರೊಮಾನ್ಸಸ್ |
| ೧೨೬ | ೧೮೯ | ಚೊಂಬ | ಡೊಂಬ |
| ೧೨೭ | ೨೦೨ | ಬದನೆಕಾಯೆ | ಬದನೆಕಾಯಿ |
| ೧೨೭ | ೨೦೨ | ಭೆಂಡೆಕಾಯಿ | ಬೆಂಡೆಕಾಯಿ |
| ೧೨೭ | ೨೧೫ | ಕಾದ ಏರದ | ಕಾರು ಏರದ |
| ೧೨೮ | ೨೨೭ | ಚಪ್ಪ ಲಿಮೆಟ್ಟಿ | ಚಪ್ಪಲಿ ಮೆಟ್ಟಿ |
| ೧೨೯ | ೩ | ಮೊಳತರೂ | ಮೊಳೆತರೂ |
| ೧೩೪ | ೨೪ | ಸುಖದ ಬೆಂದು | ಸುಖದ ಬಿಂದು |
| ೧೩೯ | ೪೦ | ಬರಿದು | ಬಿರಿದು |
| ೧೫೧ | ೫೯ | ಕುದಿವ ಜೇವ | ಕುದಿವ ಜೀವ |
| ೧೫೪ | ೩೬ | ಕ್ಯಾಮರಕಣ್ಣ | ಕ್ಯಾಮರಾಕಣ್ಣ |
| ೧೫೪ | ೩೮ | ಅರ್ಧಾಟದಲಿ | ಅರ್ಧಾಟದಲ್ಲಿ |
| ೧೫೫ | ೬೮ | ಗರಗಟ್ಟಿ | ಗರಿಗಟ್ಟಿ |
| ೧೫೬ | ೭೨ | ಕೊರಳಿಾಡಿಸಿದ್ದು | ಕೊರಳಾಡಿಸಿದ್ದು |
| ೧೫೬ | ೮೦ | ತಾರಕೆಮಾಲೆ | ತಾರಕೆಮಾಲೆ |
| ೧೫೯ | ೭ | ಜುಮನರಸುವ | ಜುಮ್ಮನರಸುವ |
| ೧೬೦ | ೩೬ | ಕೆಶಳಿಸಬೇಡ | ಕೆರಳಿಸಬೇಡ |
| ೧೬೦ | ೩೮ | ತೊಡೆಗೆಳ | ತೊಡೆಗಳ |
| ೧೬೩ | ೪೦ | ಏರಲಿರಲುಕಾಶದಲ್ಲಿ | ಏರಲಿರಲಾಕಾಶದಲ್ಲಿ |
| ೧೬೮ | ೭೦ | ಕೆಂಬಾಯಲಿ | ಕೆಂಬಾಯಲ್ಲಿ |
| ೧೭೧ | ೧೯ | ಗಾಣಸುತ್ತುವಗಾಳಿ | ಗಾಣ ಸುತ್ತುವ ಗೂಳಿ |
| ೧೭೨ | ೩೬ | ಕೈಬಾಚಿ | ಕೈಚಾಚಿ |
| ೧೮೫ | ೫ | ದೇವರ | ದೇವದ |

| ಪುಟ ಸಂಖ್ಯೆ | ಸಾಲು | ತಪ್ಪು | ಒಪ್ಪು |
|---|---|---|---|
| ೧೮೫ | ೯ | ಧನುಸ್ಸಿನವನೆ | ಧಮ್ಮಸ್ಸಿನವನೆ |
| ೧೮೫ | ೨೧ | ತುಣೆಕಗೆ | ತುಣುಕಿಗೆ |
| ೧೮೭ | ೧೫ | ಕುಕ್ಕಿಸಬೇಕಾಗಿಲ್ಲ | ಕುಕ್ಕರಿಸಬೇಕಾಗಿಲ್ಲ |
| ೧೮೮ | ೪೯ | ಬಳಕುತ್ತ | ಬಳುಕುತ್ತ |
| ೧೮೯ | ೫೮ | ರಾಡಿಯೆಬ್ಬಿಸೆಲೆ ? | ರಾಡಿಯೆಬ್ಬಿಸಲೆ ? |
| ೧೯೧ | ೨೨ | ಬೇಗಡೆವಾಗು | ಬೇಗಡೆಪಾಗು |
| ೨೦೩ | ೧೫ | **Saixl** | **Sail** |

---

